# ಸಿದ್ಧಗಂಗಾ

ಸಂಪುಟ-೨೭.　　ಸಂಚಿಕೆ-೧೧.　　ನವಂಬರ್-೧೯೯೦.

ನೀತಿ ಸಂಹಿತೆ, ಆಚಾರ ಸಂಹಿತೆ, ಧರ್ಮ ಸಂಹಿತೆಯನ್ನು
ನಂಬಿ ಬಾಳಬೇಕು. ಈ ಒಂದು ನಂಬಿಕೆಯ
ಅಭಾವದಿಂದ ಇಂದು ಜಗತ್ತು
ಅಲ್ಲೋಲಕಲ್ಲೋಲವಾಗಿದೆ.

—ಶ್ರೀ ಶಿವಕುಮಾರ ಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ
ಸಿದ್ಧಗಂಗಾ ಕ್ಷೇತ್ರ.

**ಕರ್ನಾಟಕದ ಜನತೆಗೆ ರಾಜ್ಯೋತ್ಸವದ ಹಾರ್ದಿಕ ಶುಭಾಶಯಗಳು.**

ಈ ರಾಜ್ಯೋತ್ಸವವು ತಮಗೆಲ್ಲ ಸುಖ, ಶಾಂತಿ, ಸಮೃದ್ಧಿಯನ್ನು ತರಲಿ

## ಮನವಿ

ನಮ್ಮ ರಾಷ್ಟ್ರವು ಇಂದು ಅತ್ಯಂತ ಕಷ್ಟ ಪರಿಸ್ಥಿತಿಯನ್ನು ಎದುರಿಸುತ್ತಿದೆ. ಯಾವ ದೇಶ ತನ್ನ ಸರ್ವಧರ್ಮಸಮನ್ವಯಕ್ಕೆ ಹೆಮ್ಮೆಪಡುತ್ತಿದೆಯೋ ಅದು ಈಗ ಅಪಾಯಕಾರಿ ಸ್ಥಿತಿಯಲ್ಲಿದೆ. ಇದೆಲ್ಲ ನಡೆಯುತ್ತಿರುವುದು ಧರ್ಮದ ಹೆಸರಿನಲ್ಲಿ ಹೌದು ಇದು ನಿಜಕ್ಕೂ ಅತ್ಯಂತ ದೊಡ್ಡ ಸವಾಲಾಗಿದೆ.

ಮತೀಯ ಸೌಹಾರ್ದತೆ ಹಾಗೂ ಧಾರ್ಮಿಕ ಸಹಬಾಳ್ವೆಗೆ ಕರ್ನಾಟಕ ರಾಜ್ಯ ಹೆಸರಾಗಿದೆ. ಇಲ್ಲಿ ಎಲ್ಲ ಜಾತಿ, ಮತ ಹಾಗೂ ಧರ್ಮದ ಜನರು ಶಾಂತಿಯಿಂದ ಒಟ್ಟಿಗೆ ಸ್ನೇಹಿತರಂತೆ ಬಾಳುತ್ತಿದ್ದು, ರಾಜ್ಯದ, ದೇಶದ, ಪ್ರಗತಿಗೆ ಕೊಡುಗೆ ನೀಡಿದ್ದಾರೆ.

ಕೆಲವೊಂದು ಮತೀಯ ಗಲಭೆಗಳು ದೇಶದ ಜನತೆ ನಡವೆ-ಬಾಂಧವ್ಯ ಹಾಗೂ ಪ್ರೀತಿ ವಿಶ್ವಾಸಗಳನ್ನು ಹಾಳು ಮಾಡಬೇಕೆ? ಧರ್ಮದ ಭೇದ ಭಾವಗಳು ಜನರ ನಡುವೆ ಅಡ್ಡಗೋಡೆ ಯಾಗಬೇಕೆ? ಮತೀಯ ಗಲಭೆಗಳು ನಮ್ಮ ರಾಜ್ಯದ ಹಾಗೂ ದೇಶದ ಪ್ರಗತಿಗೆ ಅಡ್ಡಿ ಉಂಟುಮಾಡಲು ಅವಕಾಶನೀಯಬೇಕೆ? ಈ ರಾಜ್ಯೋತ್ಸವದ ಸಂದರ್ಭದಲ್ಲಿ ಕರ್ನಾಟಕದ ಜನತೆಗೆ ವಿನಂತಿಸುವುದೇನೆಂದರೆ ಹಿಂಸಾಚಾರ ಹಾಗೂ ದ್ವೇಷವನ್ನು ಹತ್ತಿಕ್ಕಿ ನಾವೆಲ್ಲರು ಒಮ್ಮತದಿಂದ ಬಾಳೋಣ. ಜಾತಿ ಹಾಗೂ ಮತೀಯ ಭೇಧಗಳು ನಮ್ಮನ್ನು ಅಗಲಿಸದಿರಲಿ. ನಾವೆಲ್ಲರು ಒಂದೇ ಎಂಬ ಸಿದ್ಧಾಂತ ಗೆಲ್ಲಲಿ. ನಮ್ಮ ಚೈತನ್ಯವು ಸದೃಡ ಹಾಗೂ ಜಾತ್ಯಾತೀತ ರಾಜ್ಯ ನಿರ್ಮಾಣಕ್ಕೆ ಸಹಕಾರಿಯಾಗಲಿ. ಮತೀಯ ಸೌಹಾರ್ದತೆ ಹಾಗೂ ಶಾಂತಿ ಕಾಪಾಡುವಲ್ಲಿ ನಮ್ಮ ರಾಜ್ಯ ಮೇಲ್ಪಂಕ್ತಿಯಾಗಲಿ. ಎಲ್ಲರೂ ಹೆಮ್ಮೆಪಡುವಂತ ರಾಜ್ಯವಾಗಿರಲಿ. ಶಾಂತಿಗೆ ಸದಾವಕಾಶವನ್ನು ನೀಡೋಣ.

ಎಸ್. ಬಂಗಾರಪ್ಪ.
ಮುಖ್ಯಮಂತ್ರಿ.

# ಸಿದ್ಧಗಂಗಾ

ಸಂಪುಟ–೨೬ ಸಂಚಿಕೆ–೧೧. ನವಂಬರ್–೧೯೯೦

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

“ ಗುರುರಾಯ ಗುರುದೇವ ಗುರುತಂದೆ ಗುರುತಾಯೆ ”
ಗುರುವೆ ಶ್ರೀ ಭಾಗ್ಯವೆ ಸಕಲವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

“ ಎನ್ನ ಪರಮಾರಾಧ್ಯ ಚೆನ್ನ ಶ್ರೀ ಗುರುರಾಯ ”
ಎನ್ನಪ್ರಾಣದ ಪ್ರಾಣ ” ಲಿಂಗವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

“ಎನ್ನ ಭಾವದ ಭಾವ ಭಾವಲಿಂಗಯ್ಯ ”
“ಎನ್ನ ನಾಲಿಗೆಯೊಳಗೆ ನುಡಿಯಾಗಿ ” । ಹರಿದಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|



# ಶ್ರೀ ವಾ ಣಿ

ಇಂದು ದೇಶ ಸಂದಿಗ್ಧ ಪರಿಸ್ಥಿತಿಯಲ್ಲಿದೆ. ಇಂಥ ಸಂದರ್ಭಗಳಲ್ಲಿ ಪ್ರತಿಯೊಬ್ಬ ಭಾರತೀಯನೂ ಅತ್ಯಂತ-ಜವಾಬ್ದಾರಿಯಿಂದ ನಡೆದುಕೊಳ್ಳುವ ಅಗತ್ಯತೆಯಿದೆ. ‹‹ ಸಕಲ ಜೀವರಿಗೆ ಲೇಸನೇ ಬಯಸಿದ ” ದೇಶ ನಮ್ಮದು. “ ದಯವೇ ಧರ್ಮದ ಮೂಲ ” ವೆಂಬ ಹೃದಯವಂತಿಕೆಯಿಂದ ಬೆಳೆದು ಬಂದದ್ದು. ಸರ್ವಧರ್ಮ, ಸರ್ವ ಜನಾಂಗದ ಸುಂದರ ರಾಷ್ಟ್ರ ಇದು. ಶತ ಶತಮಾನಗಳಿಂದ ಸ್ವಧರ್ಮ ನಿಷ್ಠೆ ಪರಧರ್ಮ ಸಹಿಷ್ಣುತೆಗೆ ಹೆಸರಾದದ್ದು. “ ಅನ್ಯರಿಗೆ ಅಸಹ್ಯ ಪಡದಂಥ” ರಾಷ್ಟ್ರಧರ್ಮವನ್ನು ರೂಪಿಸುವಲ್ಲಿ ಸಂತರು, ಶರಣರು, ದಾಸರು, ಅರ್ಪಿತ ಜೀವನವನ್ನು ನಡೆಸಿದುದನ್ನು ಇಲ್ಲಿ ಸ್ಮರಿಸ-ಬೇಕು. ಶ್ರೀಮಂತ ಸಾಂಸ್ಕೃತಿಕ ಹಿನ್ನಲೆ ನಮ್ಮದು. ಜಗತ್ತಿನ ಇತರ ರಾಷ್ಟ್ರಗಳು ಭೌತ ಜೀವನಕ್ಕೆ, ಭೋಗ ಜೀವನಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟರೆ ಭಾರತ ಶಾಂತಿಗೆ, ಅಹಿಂಸೆಗೆ, ಧರ್ಮಸಹಿಷ್ಣುತೆಗೆ ಅವಕಾಶವನ್ನು ಕೊಟ್ಟಿವೆ. ವಿಶ್ವಕ್ಕೆ ಶಾಂತಿ ಮಂತ್ರವನ್ನು ನೀಡಿದ ಹೆಗ್ಗಳಿಕೆ ಈ ದೇಶಕ್ಕೆ. “ ಸಬು-ಕೋಸನ್ಮತಿದೇ ಭಗವಾನ್” ಎಂದರು ಮಹಾತ್ಮಗಾಂಧಿ. ಅವರ ಪ್ರಾರ್ಥನಾ ಮಂತ್ರವಾದ ‘ ರಾಮ್‌ಧುನ್ ’ ವಿಶ್ವಭ್ರಾತೃತ್ವದ ಮಂಗಳ ಕಹಳೆ. ಹಿಂಸೆ ಧರ್ಮವನ್ನು ಬೆಳೆಸಲಾರದು, ಹಿಂಸೆ ಇದ್ದಲ್ಲಿ ಧರ್ಮ ಇರಲಾರದು. ಧರ್ಮ ಧಾರಣಶಕ್ತಿಯನ್ನು ಪಡೆದಿದೆ. ಅದು ಕೂಡಿ ಬದುಕುವುದನ್ನು ಕಲಿಸುತ್ತದೆ. ವರ್ಣ, ವರ್ಗ, ವಯ, ಲಿಂಗಗಳ ತರ ತಮವನ್ನು ಅದು ಒಪ್ಪುವುದಿಲ್ಲ. ಧರ್ಮ ಮಾನವೀಯತೆಯ ಅಖಂಡ ಧಾರೆ. - ಭಗವಾನ್ ಬಸವಣ್ಣನೆಂದಿರುವಂತೆ ‹‹ಇವನಾರವ ಇವನಾರವ ಇವನಾರವ ಎಂದೆನ್ನದೆ, ಇವನಮ್ಮವ ಇವನಮ್ಮವ ಇವನಮ್ಮವ ” ನೆಂದು ಸಕಲರನ್ನೂ ಅಪ್ಪಿಕೊಳ್ಳುವುದನ್ನು

ಕಲಿಸುತ್ತದೆ ಧರ್ಮ. ಅದು ತರ್ಕದಿಂದ, ವಾದ ವಿವಾದದಿಂದ, ಸಾಕ್ಷಿ ಪುರಾವೆಗಳಿಂದ, ಕೊಡು ಕೊಳ್ಳುವ ವ್ಯಾಪಾರದಿಂದ ಬರುವಂಥದಲ್ಲ. ಪ್ರೇಮ ಪೂರ್ಣತ್ಯಾಗದಿಂದ 'ಮೂಡುವಂಥದ್ದು. ನಿರ್ವ್ಯಾಜ ಪ್ರೀತಿಯಿಂದ ಬೆಳೆಯುವಂಥದ್ದು. ಕಾಲ, ದೇಶಗಳನ್ನು ಮೀರಿ ಬೆಳೆವಂಥದ್ದು. ಬಾಳುವ ಕಲೆಯನ್ನು ಕಲಿಸುವಂಥದ್ದು. ಧರ್ಮದ ಹೆಸರಿನಲ್ಲಿ ಹಿಂಸೆ, ರಕ್ತಪಾತ, ಜೀವ ಹತ್ಯೆ ಮಾಡುವುದು ಧರ್ಮದ್ರೋಹವೆನಿಸುತ್ತದೆ. ಯಾವ ಧರ್ಮವೂ ಹಿಂಸೆಯನ್ನು ಬೋಧಿಸಲಾರದು. ಬೋಧಿಸಿದರೆ ಅದು ಧರ್ಮವೆನಿಸಲಾರದು. ಇಂದು ನಮ್ಮ ಹೃದಯಗಳು ದೇವಮಂದಿರಗಳಾಗಬೇಕು ಅಲ್ಲಿ ಸದ್ಭಾವ, ಸಚ್ಛೀಲ, ಸಚ್ಚಿಂತನಗಳು ಬೆಳಗಬೇಕು. ದೇವರು, ಧರ್ಮ ಮಹಾಪುರುಷರ ಹೆಸರಿನಲ್ಲಿ ಉದ್ವೇಗ, ಉದ್ರೇಕ, ಆವೇಶಗಳು ವಿಜೃಂಭಿಸಿ ಅನರ್ಥ, ಅನಾಹುತ, ವಿಪತ್ಪರಂಪರೆಗಳು ಬೆಳೆಯಬಾರದು. ಮುಂದಿನ ಪೀಳಿಗೆ ಶಾಂತಿಯಿಂದ ಸಮೃದ್ಧಿಯಿಂದ ಬಾಳುವಂಥ ಪರಿಸರವನ್ನು ನಿರ್ಮಾಣ ಮಾಡಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯ. ಪ್ರತಿಷ್ಠೆ, ಅಭಿಮಾನಾ-ತಿರೇಕತೆಗಳಿಗಿಂತ ಪ್ರಾಜ್ಞಮನೋಭಾವ ಇಂದು ಅತಿ ಮುಖ್ಯವಾಗಿದೆ. ಬಹು ಸಂಸ್ಕೃತಿಗಳ ಬೃಹತ್ ರಾಷ್ಟ್ರವಾಗಿರುವ ಭಾರತದಲ್ಲಿ ಮೂಲಭೂತವಾಗಿರುವ ಅನ್ನ, ವಸತಿ, ಅಕ್ಷರಜ್ಞಾನ, ರೋಗನಿವಾರಣೆ, ನಿರುದ್ಯೋಗ ಸಮಸ್ಯೆಗಳು ತಾಂಡವವಾಡುತ್ತಿವೆ. ಅವುಗಳ ಪರಿಹಾರಕ್ಕೆ ಸರ್ವಪ್ರಯತ್ನ ನಡೆಯಬೇಕಿದೆ. ಅವುಗಳಿಗಾಗಿ ಪರಿಪೂರ್ಣ ಕಾರ್ಯಕ್ರಮಗಳನ್ನು ಯೋಚಿಸಿ ಮುನ್ನಡೆಯ-ಬೇಕಾಗಿದೆ. ಶಾಂತಿ, ಸಂಧಾನ, ಪರಸ್ಪರ ಸಮಾಲೋಚನೆಗಳ ಮೂಲಕ ಎದುರಾಗುವ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ವಿವೇಕಜ್ಯೋತಿ ಬೆಳಗಬೇಕಾಗಿದೆ. ಪಕ್ಷಕ್ಕಿಂತ ಸರ್ಕಾರ, ಸರ್ಕಾರಕ್ಕಿಂತ ದೇಶ, ದೇಶಕ್ಕಿಂತ ಮನುಕುಲದ ಕಲ್ಯಾಣವನ್ನಿಂದು ಗಂಭೀರವಾಗಿ ಪರ್ಯಾಲೋಚಿಸಬೇಕಲ್ಲವೆ? ‟ ಸರ್ವೇ ಜನಾಃ ಸುಖಿನೋಭವಂತು ” ಎಂದ ರಾಷ್ಟ್ರದಲ್ಲಿ ಇಂದು ನಡೆ-ದಿರುವುದನ್ನು ಗಮನಿಸಿದರೆ ಪರಂಪರೆಯ ಅರಿವು ನಮಗಿಲ್ಲವಾಯಿತೇ ಎನಿಸುತ್ತದೆ. ಜೀವನ ಶ್ರದ್ಧೆ ಮೂಡುವಂಥ ವ್ಯವಸ್ಥೆಗೆ ಜನನಾಯಕರು, ಸಮಾಜ ಚಿಂತಕರು, ರಾಷ್ಟ್ರದ ಆಡಳಿತ ಸೂತ್ರ ಹಿಡಿದಿರುವವರು, ದೂರದರ್ಶಿಗಳಾಗಿ ಹೆಜ್ಜೆಯಿಡಬೇಕಾಗಿದೆ.



# ಶ್ರೀ ಸಿದ್ಧಲಿಂಗೇಶ್ವರ ವಚನ



ಅಂಗ ಹಲವರ ಮೇಲೆ ನಿರಿದಾತನ ಕಾಣುವ ಕಣ್ಣುವೊಂದೇ ನೋಡಾ

ಆ ಕಾಣುವ ಕಂಗಳು ತನ್ನ ಕಣ್ಣೋ ಬೇರೊಂದು ಬಿನ್ನಾಣದ ಕಣ್ಣೋ

ಎಂಬ ಬೆಡಗನರಿದು, ತನ್ನ ಕಣ್ಣು ಕಳದು, ಬಿನ್ನಾಣದ ಕಣ್ಣನಳಿಯಲು

ತನ್ನ ಮುನ್ನಿನ ಕಣ್ಣು ಕಾಣಬಂದಿತ್ತು.

ಆದು ನಿನ್ನ ಕಣ್ಣಿಂದರಿದ ಮಾತ್ರದಲ್ಲಿ ಎನ್ನನುಂಗಿತ್ತು, ನಿನ್ನಲ್ಲಿ ಅಡಗಿತ್ತು.

ಅದಡಗಿದ ಠಾವಿನಲ್ಲಿ ನಾನಡಗಿ ನಿರ್ವಯಲಾದೆನು ಕಾಣಾ

ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ.

ಶರಣನ ಸರ್ವಾಂಗದಲ್ಲಿ ಸರ್ವಾಂಗ ಲಿಂಗವಾದ ಪರಶಿವಲಿಂಗವನ್ನು ನಿರೀಕ್ಷಿಸುತ್ತಿರುವ ಸುಜ್ಞಾನ ನೇತ್ರವಿದೆ. ಅದು ಲಿಂಗದಲ್ಲಿ ಏಕಾರ್ಥವಾಗಿದೆ. ಆ ಸುಜ್ಞಾನ ನೇತ್ರವು ಆತ್ಮನ ಪ್ರಪಂಚಿನ ಕಣ್ಣೋ, ಮಾಯೆಯ ಭಿನ್ನಜ್ಞಾನ-ಕಣ್ಣೋ ಎಂಬುದಾಗಿ ಸ್ವಾತ್ಮಜ್ಞಾನವೆಂಬ ಕಣ್ಣಿನಿಂದ ಪರಾಮರ್ಶೆಮಾಡಿ, ಅಹಂಭಾವದ ಜ್ಞಾನ ಕಳೆದುಕೊಂಡು, ತನ್ನಪೂರ್ಣಜ್ಞಾನ ನಿದರ್ಶನವಾಯಿತು. ಆ ಪೂರ್ಣ ಜ್ಞಾನವೇ ತನ್ನ ನಿಜ ನೇತ್ರವೆಂದು ಸ್ವಾತ್ಮ ಜ್ಞಾನದಿಂದ ತಿಳಿದಾಗಮಾತ್ರ ತನ್ನ ಸರ್ವಾಂಗದಲ್ಲಿ ತುಂಬಿ ನಿಜಾನಂದ ಲೀಲೆಯಲ್ಲಿ ನೆಲಸಿದಾಗ, ಆ ಲಿಂಗಸ್ವರೂಪಿಯಾಗಿರುತ್ತಾನೆ ಶಿವಶರಣನು.

# ಸಿದ್ಧಗಂಗಾ

ಪ್ರಧಾನ ಸಂಪಾದಕರು
**ಪ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಬಿ. ವೀರಭದ್ರಯ್ಯ**
**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾಕ್ಷೇತ್ರ**

## ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 250-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ದಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

**"ಸಂಪಾದಕರು"**
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ.

## ಪೂಜ್ಯ ಶ್ರೀ ಶ್ರೀ ಗಳವರಿಗೆ ಭಕ್ತಿ ಪೂರ್ವಕ ಅಭಿನಂದನೆ

ಕರ್ನಾಟಕ ಸರ್ಕಾರ 1990 ರ ರಾಜ್ಯೋತ್ಸವ ಸಂದರ್ಭದಲ್ಲಿ ತಮಗೆ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿರುವುದನ್ನು ಕಂಡು ತುಂಬು ಹೃದಯದ ಭಕ್ತಿಪೂರ್ವಕ ಅಭಿನಂದನೆಗಳನ್ನು '**ಸಿದ್ಧಗಂಗಾ**' ಅರ್ಪಿಸಲು ಸಂತೋಷಿಸುತ್ತದೆ. ಪ್ರಶಸ್ತಿ, ಪ್ರಚಾರಗಳಿಂದ ದೂರವಿರುವರು ತಾವು. ದಾಸೋಹ - ಕಾಯಕಗಳೆರಡೇ ತಮ್ಮ ಸೇವಾ ಪಂಚಾಕ್ಷರಿ. ಸೇವೆಯನ್ನು ಸಮಾಜದ ಅಭಿವೃದ್ಧಿಗಾಗಿ ತಮ್ಮ ಹಾಗೇ ನಿಷ್ಕಾಮ ಭಾವದಿಂದ ಮಾಡಿದವರು ವಿರಳ. ತಾವು ಪ್ರತಿ ನಿತ್ಯ ಮಧ್ಯರಾತ್ರಿ 2-15 ಕ್ಕೆ ಎದ್ದು ಲಿಂಗಪೂಜೆಯಲ್ಲಿ ತನ್ಮಯರಾಗುವುದು ಲೋಕಕಲ್ಯಾಣಕ್ಕಾಗಿಯೇ ಎಂಬುದನ್ನು ತಮ್ಮನ್ನು 'ಕಂಡ' ವರೆಲ್ಲಬಲ್ಲರು. ಏಕಾಂತದ ಪೂಜಾ ಫಲವನ್ನು ಲೋಕಾಂತದ ಒಳಿತಿಗಾಗಿ ಬಳಸುವ ಜಾಗೃತ ಜಂಗಮ ಜ್ಯೋತಿಯಾದ ತಮ್ಮ ಸೇವೆಯನ್ನು ರಾಜ್ಯ ಸರ್ಕಾರ ಗುರುತಿಸಿದ್ದು ವಿಳಂಬವಾಯಿತಾದರೂ ಗುರುತಿಸಿ ತೃಪ್ತಿ ಹೊಂದಿದುಕ್ಕಾಗಿ ಸರ್ಕಾರಕ್ಕೆ 'ಸಿದ್ಧಗಂಗಾ' ವಂದನೆಗಳನ್ನು ಅರ್ಪಿಸುತ್ತದೆ. ಅರುವತ್ತು ವರ್ಷಗಳಿಂದ ಸುದೀರ್ಘ ಸೇವಾ ಜೀವನವನ್ನು ನೆಡೆಸುತ್ತಿರುವ ತಾವು ಶ್ರೀ ಮಠಕ್ಕೆ ಹೊಸ ಆಯಾಮವನ್ನೇ ತಂದು ಕೊಟ್ಟಿದ್ದೀರಿ. ಭಕ್ತಾದಿಗಳು, ಯಾತ್ರಾರ್ಥಿಗಳು, ಯಾವ ನಿಯಮ ನಿರ್ಬಂಧಗಳೂ ಇಲ್ಲದಂತೆ ಯಾವಾಗ ಬೇಕಾದರೂ ಅವರ ವೇಳೆಯಲ್ಲೂ ಸಹ ಮುಕ್ತವಾಗಿ '**ದರ್ಶನ**' ಮಾಡುವ '**ಶಿವಪಥ**' ವನ್ನು ನಿರ್ಮಿಸಿದ್ದೀರಿ. ಮಠವೆಂಬುದು ಕೇವಲ ಕಲ್ಲು ಇಟ್ಟಿಗೆ ಗಾರೆ ಗಚ್ಚುಗಳಿಂದ ಕಟ್ಟುವ ಸೌಧ, ಸದನಗಳಲ್ಲ, ಭಕ್ತಾದಿಗಳ ಹೃದಯ ಮಂದಿರವೆಂಬುದನ್ನು ಪ್ರತ್ಯಕ್ಷ ಮಾಡಿತೋರಿಸಿದ್ದೀರಿ. ತಾವು ಮಠಕ್ಕೆ ಬಂದಾಗ ಶ್ರೀ ಮಠ ಚಿಕ್ಕದಾಗಿತ್ತು; ಇಂದು ಬೃಹತ್ತಾಗಿದೆ. ಶಾಖೋಪಶಾಖೆಯಾಗಿ ಬೆಳೆದಿದೆ. ಇದರ ಹಿಂದೆ ತಮ್ಮ ಶಿವಯೋಗದ ಸರ್ವ ಶ್ರಮವಡಗಿದೆ. ನಾಲ್ಕಾಣೆ, ಒಂದು ಪಾವು ರಾಗಿಯನ್ನು ತುಂಬು ಮನದಿಂದ ಬಡವರಿಂದ ಸಂಗ್ರಹಿಸಿ '**ತವನಿಧಿ**' ಯನ್ನಾಗಿ ರೂಪಿಸಿ ಸಹಸ್ರಾರು ಮಕ್ಕಳ ಬಾಳಿಗೆ ಬೆಳಕು ತೋರಿದಿರಿ. ಅವರಲ್ಲಿ ಅನೇಕರಿಂದು ಸುಸಂಸ್ಕೃತರಾಗಿ ರಾಜ್ಯದ ವಿವಿಧ ಕ್ಷೇತ್ರಗಳಲ್ಲಿ ಕೀರ್ತಿವಂತರಾಗಿದ್ದಾರೆ.

ತಮ್ಮ ವಿದ್ವತ್ತು ಹೃದಯವಂತಿಕೆ, ರಾಷ್ಟ್ರಭಕ್ತಿಗಳಿಂದ ರಾಷ್ಟ್ರದ ಮುಖಂಡ ಮಾರು ಹೋಗಿದ್ದಾರೆ. "**ರಾಜಕೀಯ ಲಾಭಕ್ಕಾಗಿ ಮಠವನ್ನು ನೋಡ ಪರಿಪೂರ್ಣ ಧಾರ್ಮಿಕ ಆಕಾಂಕ್ಷೆಯಿಂದ ಮಾತ್ರ ತಮ್ಮೆಡೆಗೆ ಗಣ್ಯರ ಸಾಮಾನ್ಯರು ಬರುತ್ತಾರೆ ಸ್ವಾಮೀಜಿ**" ಎಂದ ಉನ್ನತ ಅಧಿಕಾರಿಗಳ ಮಾ ನೆನಪಿಗೆ ಬರುತ್ತದೆ. "**ಸುಳಿದು ಸೂತಕ**" ವಾಗದಂತೆ ಧರ್ಮ ಸಂಸ್ಥೆಯನ ಎತ್ತರಕ್ಕೆ ಬೆಳೆಸಿದ್ದೀರಿ. ಬಂದ 'ನೋವು' ಗಳೆಲ್ಲವನ್ನು ಸಹಿಸಿದ್ದೀರಿ. '**ಲೋಕದ** ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾ ಗಳಾಗಿ ನಡೆದಿದ್ದೀರಿ. ಕರ್ನಾಟಕ ರಾಜ್ಯ ನೀಡುತ್ತಿರುವ ರಾಜ್ಯ ಪ್ರಶಸ್ತಿ ಯಿಂ ತಮಗೇನೂ ಅನಿಸಿರಲಾರದು. ಆದರೆ '**ಸಿದ್ಧಗಂಗಾ**' ಬಳಗದವರಾದ ಭಕ್ತರೆ ರಿಗೆ ಸಂತೋಷವಾಗಿದೆ. ರಾಷ್ಟ್ರ ಪ್ರಶಸ್ತಿಯೂ ತಮ್ಮ ಸೇವೆಗೆ ಬರಬೇಕಾದುದೆ ಶಿವಯೋಗಿಗಳಾದ ತಮಗೆ ಈ ಪ್ರಶಸ್ತಿಗಳಿಂದ ಆಗಬೇಕಾದುದೇನೂ ಇಲ್ಲ. ತಾ ಸದಾ "**ಕೂಡಲ ಸಂಗನ ರಾಜತೇಜ**" ದಲ್ಲಿರುವುದರಿಂದ ಇದೆಲ್ಲ ನಮ್ಮ ಸಂತೋ ಷಕ್ಕೆ **ಹೂಬಿಟ್ಟ ಬಳ್ಳಿಗೆ, ಹಣ್ಣು ಕೊಟ್ಟ ಮರಕ್ಕೆ ಒಂದು ಬಿಂದಿಗೆ ನೀರುಣಿ ಕೃತಕೃತ್ಯ** ಭಾವಕ್ಕೆ, ತಮ್ಮೊಂದಿಗೆ ಇನ್ನಿತರ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ೬೭ ಪ್ರತಿಭಾವಂತರಿಗೆ ರಾಜ್ಯ ಪ್ರಶಸ್ತಿ ಸಂದಿದೆ. ರಾಜ್ಯದ ಸಾಂಸ್ಕೃತಿಕ ದಿಗಂತವನ ವಿಸ್ತರಿಸಿದ ಕೀರ್ತಿಗೆ ಅವರೆಲ್ಲ ಪಾತ್ರರಾಗಿದ್ದಾರೆ, ಅವರೆಲ್ಲರಿಗೂ 'ಸಿದ್ಧಗಂಗಾ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಮತ್ತೊಮ್ಮೆ ಭಕ್ತಿ ಪೂರ್ವಕ ಅಭಿನಂದನೆಗಳು.



# ಸುಪ್ರೀಂ ಕೋರ್ಟ್ ತೀರ್ಪು

## ಸಿದ್ಧಗಂಗಾ ಮಠದ ಶ್ರೀ ಗೌರಿಶಂಕರಸ್ವಾಮಿಗಳ ಉಚ್ಚಾಟನೆ ಕ್ರಮಬದ್ಧ

ಸಿದ್ದಗಂಗಾಮಠದಿಂದ ತಮ್ಮನ್ನು ಉಚ್ಚಾಟಿಸಿ ಹಿರಿಯ ಸ್ವಾಮಿಗಳು ಕೈಗೊಂಡಿದ್ದ ಕ್ರಮವನ್ನು ಪ್ರಶ್ನಿಸಿ ಹಾಗೂ ತಮ್ಮನ್ನು ಮಠದಿಂದ ತೆರವು ಮಾಡಿಸದಂತೆ ಆದೇಶ ನೀಡಬೇಕೆಂದುಕೋರಿ ಮಠದ ಶ್ರೀ ಗೌರಿಶಂಕರಸ್ವಾಮಿಗಳು ಸಲ್ಲಿಸಿದ್ದ ಮೇಲ್ಮನವಿ. ಯನ್ನು ವಿಚಾರಣೆಯ ನಂತರ ಸುಪ್ರೀಂಕೋರ್ಟ್‌ನ ನ್ಯಾಯಾಲಯದ ಮೂವರು ಸದಸ್ಯರ ನ್ಯಾಯ ಪೀಠ 16-11-1990 ಶುಕ್ರವಾರ ತಿರಸ್ಕರಿಸಿತು ಎಂದು ಮಠದ ಆಡಳಿತಾಧಿಕಾರಿಗಳು ತಿಳಿಸಿದ್ದಾರೆ.

ಸಿದ್ಧಗಂಗಾ ಮಠದಲ್ಲಿ ಕಿರಿಯಸ್ವಾಮಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದ ಗೌರೀಶಂಕರ ಸ್ವಾಮಿಗಳನ್ನು ಮಠದ ಪುರೋಭಿವೃದ್ಧಿ, ಅಸ್ತಿತ್ವದ ದೃಷ್ಟಿ ಹಾಗೂ ಸಮಾಜದ ಹಿತ ದೃಷ್ಟಿಯಿಂದ ತಮ್ಮ ಶಿಷ್ಯರಾಗಿ ಮುಂದುವರಿಯಲು ಅವರು ಅನರ್ಹರೆಂದು ತೀರ್ಮಾನಕ್ಕೆ ಹಿರಿಯ ಸ್ವಾಮಿಗಳು ಬಂದು 31-1-1988 ರಂದು ಗೌರಿಶಂಕರಸ್ವಾಮಿಗಳನ್ನು ಮಠದಿಂದ ಕಿತ್ತು ಹಾಕಿದ್ದರು

ಈ ಉಚ್ಚಾಟನೆ ಕ್ರಮವನ್ನು ಪ್ರಶ್ನಿಸಿ ಗೌರಿಶಂಕರ ಸ್ವಾಮಿಗಳು ತುಮಕೂರಿನ ಪ್ರಿನ್ಸಿಪಲ್ ಸಿವಿಲ್ ಜಡ್ಜ್ ಮತ್ತು ಚೀಫ್ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟರ ಮುಂದೆ ಸಲ್ಲಿಸಿದ್ದ ಮನವಿ 1989ರ ಜನವರಿ 6ರಂದು ತಿರಸ್ಕೃತವಾಗಿತ್ತು. ಆಗ ತೀರ್ಪು ನೀಡಿದ್ದ ನ್ಯಾಯಮೂರ್ತಿ ಶ್ರೀ ಕೆ.ಬಾಲಕೃಷ್ಣ ಅವರು ಗೌರಿಶಂಕರಸ್ವಾಮಿಗಳ ಸ್ಥಳ ತೆರವು ಮಾಡುವಂತೆ ಆದೇಶ ನೀಡಿದ್ದರು. ಅನಂತರ 1989 ಮಾರ್ಚಿ 31 ರಂದು ರಾಜ್ಯ ಹೈಕೋರ್ಟ್‌ನಲ್ಲಿ ಕೂಡ ಗೌರಿಶಂಕರ ಸ್ವಾಮಿಗಳ ಅರ್ಜಿಯನ್ನು ನ್ಯಾಯಮೂರ್ತಿ ಶ್ರೀ ಪಿ. ಕೆ. ಶ್ಯಾಮಸುಂದರ್ ತಿರಸ್ಕರಿಸಿ ಉಚ್ಚಾಟನೆ ಕ್ರಮವನ್ನು ಎತ್ತಿ ಹಿಡಿದಿದ್ದರು.

ಸುಪ್ರೀಂಕೋರ್ಟ್‌ನಲ್ಲಿ ಪ್ರಕರಣ ಇತ್ಯರ್ಥವಾಗುವವರೆಗೆ ಸಿದ್ಧಗಂಗಾ ಮಠದಲ್ಲಿ ಪೂಜೆಗೆ ಮತ್ತು ವಸತಿಗೆ ಏರ್ಪಾಡು ಮಾಡಬೇಕೆಂದು ಗೌರೀಶಂಕರ ಸ್ವಾಮಿಗಳು ಮನವಿ ಸಲ್ಲಿಸಿದ್ದರು. ಅದಕ್ಕೆ ನ್ಯಾಯಾಲಯ ಅನುಮತಿ ನೀಡಿರಲಿಲ್ಲ, ಆದರೂ ಕೂಡ ಮಠದಲ್ಲಿ ಒಂದು ಕೊಠಡಿಯನ್ನು ಗೌರಿಶಂಕರ ಸ್ವಾಮಿಗಳಿಗೆ ಬಿಟ್ಟುಕೊಡಲಾಗಿತ್ತು. ಸುಪ್ರೀಂಕೋರ್ಟಿನ ನ್ಯಾಯಮೂರ್ತಿಗಳಾದ ಶ್ರೀ ಜಗನ್ನಾಥಶೆಟ್ಟಿ, ಶ್ರೀ ಎಸ್.ಸಿ.ರೇ. ಮತ್ತು ಶ್ರೀ ಜೆ.ಎಸ್. ವರ್ಮಾ ಅವರಿಂದ ಕೂಡಿದ ನ್ಯಾಯಪೀಠ ಎರಡೂ ವಾದಗಳನ್ನು ಕೇಳಿದ ಮೇಲೆ ಗೌರಿಶಂಕರಸ್ವಾಮಿಗಳ ಮನವಿಯನ್ನು ತಿರಸ್ಕರಿಸಿ ಹಿರಿಯಸ್ವಾಮಿಗಳು ಕೈಗೊಂಡ ಕ್ರಮವನ್ನು ಎತ್ತಿ ಹಿಡಿದಿದೆ.

ಗೌರಿಶಂಕರಸ್ವಾಮಿಗಳ ಉಚ್ಚಾಟನೆಯ ನಂತರ ಅವರ ಸ್ಥಾನದಲ್ಲಿ ಶ್ರೀ ಸಿದ್ಧಲಿಂಗಸ್ವಾಮಿಗಳನ್ನು ಉತ್ತರಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿದೆ.

ಗೌರಿಶಂಕರ ಸ್ವಾಮಿಗಳನ್ನು ಉತ್ತರಾಧಿಕಾರಿಯನ್ನಾಗಿ ನಿಯೋಜಿಸುವಾಗ ಅವರು ಸಂಸ್ಕೃತ, ಸಾಹಿತ್ಯ, ವೇದಾಂತ, ದರ್ಶನ ಶಾಸ್ತ್ರ, ವಚನ ಸಾಹಿತ್ಯಗಳಲ್ಲಿ ಉತ್ತಮ ಪಾಂಡಿತ್ಯಗಳಿಸಲೆಂಬ ಇಚ್ಛೆಯಿಂದ ಅವರ ಅಧ್ಯಯನಕ್ಕೆ ಸಕಲಸೌಲಭ್ಯಗಳನ್ನು ಒದಗಿಸಿ ಕೊಟ್ಟೆವು. ನಮ್ಮ ಮಾರ್ಗದರ್ಶನದಲ್ಲಿ ಲಿಂಗಪೂಜಾನಿಷ್ಠೆ, ಆಚಾರ ನಿಷ್ಠೆ, ಸದ್ವರ್ತನೆ. ಸದಾಚಾರ, ವಿಧೇಯತೆ, ಸೇವಾ ನಿಷ್ಠೆ, ದಾಸೋಹಪ್ರಿಯತೆ, ಪಾವಿತ್ರ್ಯತೆ ಮತ್ತು ಪೂಜ್ಯತೆಯುಳ್ಳವರಾಗುವರೆಂದು ಮತ್ತು ಶ್ರೀ ಮಠದಲ್ಲಿ ಪರಂಪರಾಗತವಾಗಿ ಬಂದ ಸೇವಾವೃತ್ತಿ, ತ್ರಿವಿಧ ದಾಸೋಹ, ವಿದ್ಯಾಭಿವೃದ್ಧಿ, ಅನಾಥರಕ್ಷಣೆಗಳಲ್ಲಿ ಆಸಕ್ತಿ ತೋರಿ. ಸೇವಾ ಮನೋಭಾವನೆಗಳನ್ನು ಬೆಳೆಸಿಕೊಂಡು ಹೋಗುವರೆಂದು ಸದಭಿಪ್ರಾಯ ಮತ್ತು ಸದ್ಭಾವನೆಯುಳ್ಳವರಾಗಿದ್ದೆವು.

"ಅವರ ಉತ್ತರಾಧಿಕಾರದ ನಂತರ ಎರಡು ವರ್ಷಗಳ ಕಾಲ ಅವರನ್ನು ನಮ್ಮ ಜೊತೆಯಲ್ಲಿಯೇ ಇಟ್ಟುಕೊಂಡು ಅವರಿಗೆ ಆಚಾರ, ವಿಚಾರ ಲಿಂಗಪೂಜಾ ನಿಷ್ಠೆ ಮಾರ್ಗದರ್ಶನ ಮಾಡಿದ್ದೆವು. ಜೊತೆಗೆ ಅವರನ್ನು ಉನ್ನತ ಪಂಡಿತರನ್ನಾಗಿ ಮಾಡಲು ವಿದ್ಯಾಭ್ಯಾಸಕ್ಕಾಗಿ ವಿಶೇಷಸೌಲಭ್ಯ ಮತ್ತು ವ್ಯವಸ್ಥೆಗಳನ್ನು ಮಾಡಿಕೊಟ್ಟಿದ್ದೆವು. ಅದೇ ರೀತಿ ಕ್ರಮೇಣ ಶ್ರೀ ಮಠದ ವ್ಯವಹಾರ ಮತ್ತು ದೈನಂದಿನ ಕೈಂಕರ್ಯಗಳಲ್ಲಿ ತೊಡಗಿಸಲು ಅವಕಾಶವನ್ನು ಕಲ್ಪಿಸಿಕೊಟ್ಟಿದ್ದೆವು. ಅವರ ನಡತೆ ಮತ್ತು ವ್ಯವಹಾರ ಗಳಲ್ಲಿ ಲೋಪದೋಷಗಳು ಕಂಡು ಬಂದಾಗ ಮೌಖಿಕವಾಗಿಯೂ ಮಾರ್ಗದರ್ಶನ- ಗಳನ್ನು ಮಾಡಿದ್ದೆವು. ಇದರ ಜೊತೆಗೆ ಶ್ರೀಮಠದ ಅಭಿಮಾನಿಗಳಿಂದ, ಭಕ್ತರುಗಳಿಂದ ಆಗಿಂದಾಗ್ಗೆ ಹಿತವಚನಗಳನ್ನೂ ಹೇಳಿಸಿದ್ದೆವು. ಅನೇಕ ಪೂಜ್ಯ ಮಠಾಧಿಪತಿಗಳಿಂದಲೂ ಮತ್ತು ಗಣ್ಯ ವ್ಯಕ್ತಿಗಳಿಂದಲೂ ಅವರಿಗೆ ಆಗಿಂದಾಗ್ಗೆ ಬುದ್ಧಿವಾದವನ್ನು ಹೇಳಿಸಿದ್ದೆವು.

ಆದರೆ ಅವರನ್ನು ಸಚ್ಚಾರಿತ್ರವುಳ್ಳ ದಕ್ಷರಾದ, ಶಿವಯೋಗನಿರತರಾದ, ಲಿಂಗಪೂಜಾ ನಿಷ್ಠರಾದ, ಒಳ್ಳೆಯ ಆಚಾರ ವಿಚಾರವುಳ್ಳ ಅಖಂಡ ಬ್ರಹ್ಮಚಾರಿಯಾದ ಮತ್ತು ಶ್ರೀ ಮಠದ ಪವಿತ್ರ ಪರಂಪರೆಯನ್ನು ಉಳಿಸಿ ಮತ್ತು ಬೆಳೆಸಿಕೊಂಡು ಶ್ರೀ ಮಠಕ್ಕೆ ನಮ್ಮ ನಂತರ ಯೋಗ್ಯ ಮಠಾಧಿಕಾರಿಯನ್ನಾಗಿ ಅವರನ್ನು ಮಾಡಬೇಕೆಂಬ ನಮ್ಮ ಪ್ರಯತ್ನಗಳು, ಅವರ ಉದಾಸೀನತೆ, ಅವಿಧೇಯತೆ, ಕ್ರೌರ್ಯ, ದುಷ್ಟ ಸಹವಾಸ, ದುರ್ನಡತೆ, ಅಶ್ರದ್ಧೆ, ಗೂಂಡಾವೃತ್ತಿ, ಮತ್ತು ಅನೈತಿಕತೆಗಳಿಂದ ವಿಫಲವಾದವು. ಆದರಿಂದಾಗಿ ಅವರನ್ನು 31.3.88ರಂದು ಮಠದಿಂದ ಉಚ್ಚಾಟಿಸಲಾಗಿದೆ ಎಂದು ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ತಿಳಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

# ವೀರಶೈವ ಧಾರ್ಮಿಕ ವಿಚಾರಗಳು

ಶ್ರೀ ಬಿ. ನಂಜುಂಡಪ್ಪ, ಅಪ್ಪಣ್ಣನವರಬೀದಿ, ಕನಕಪುರ.

## ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳಿಂದ ಅಷ್ಟಾವರಣ, ಪಂಚಾಚಾರ, ಮತ್ತು ಷಟ್‌ಸ್ಥಲಗಳ ಸಂಕ್ಷಿಪ್ತ ಪರಿಚಯ.

ವೀರಶೈವ ಧರ್ಮಾಚರಣೆಯಲ್ಲಿ ಅಷ್ಟಾವರಣ, ಪಂಚಾಚಾರ ಮತ್ತು ಷಟ್-ಸ್ಥಲಗಳು ಧರ್ಮದ ವೈಶಿಷ್ಟ್ಯಗಳಾಗಿವೆ. ಗುರು, ಲಿಂಗ, ಜಂಗಮ ಇವು ಮೂರು ಆ ಪರವಸ್ತುವಿನ ಮೂರು ರೂಪಗಳೇ ಆಗಿವೆ. ಭಸ್ಮ, ರುದ್ರಾಕ್ಷಿ, ಮಂತ್ರಗಳು ಸಾಧನಗಳು, ಪಾದೋದಕ ಪ್ರಸಾದಗಳು. ಫಲಗಳು ಅವುಗಳ ಅಂತರಂಗ ಬಹಿರಂಗ ಸಂಬಂಧಾಚರಣೆಯಿಂದಲೇ ಲಿಂಗಾಂಗ ಸಾಮರಸ್ಯ ಜ್ಞಾನವುಂಟಾಗುತ್ತವೆ.

### ಅಷ್ಟಾವರಣಗಳು

ಶಿವದೀಕ್ಷೆಯ ಕಾಲದಲ್ಲಿ ಶಿಷ್ಯನಿಗೆ ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ, ಪಾದೋದಕ, ಮತ್ತು ಪ್ರಸಾದ ಎಂಬ ಎಂಟು ಆವರಣಗಳ ಸಂಬಂಧ ಉಂಟಾಗುತ್ತದೆ. ಈ ಎಂಟು ಆವರಣಗಳ ರಕ್ಷಣೆಯಿಂದ ಅಂಗನು ಲಿಂಗದಲ್ಲಿ ಬೆರೆಯುುವ ಗುರಿಯನ್ನು ಸಾಧಿಸುವನು. ಇವು ಭಕ್ತನಿಗೆ ಅಂಗವಾಗಿವೆ.

1. **ಗುರು:-** ದೀಕ್ಷೆಯ ಮೂಲಕ ಇಷ್ಟಲಿಂಗವನ್ನು ಧರಿಸಿ, ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳ ಜ್ಞಾನ ಬೋಧೆ ಮಾಡುವನು ಗುರು. ನಮಗೆ ಆಚಾರ ವಿಚಾರಗಳನ್ನು ಕಲಿಸುವನು ದೇಹವನ್ನು ಶುದ್ಧವಾಗಿಟ್ಟುಕೊಳ್ಳುವ ಆಚಾರಗಳನ್ನು ಮನಸ್ಸು ಒಳ್ಳೆಯ ವಿಚಾರಗಳಲ್ಲಿ ತೊಡಗುವ ಪರಿಯನ್ನು ತಿಳಿಸುವನು.

2. **ಲಿಂಗ:-** ಹಸ್ತಮಸ್ತಕ ಸಂಯೋಗದಿಂದ ಶ್ರೀ ಗುರುವು ಶಿಷ್ಯನಲ್ಲಿರುವ ಚೈತನ್ಯವನ್ನು ಬಹಿಷ್ಕರಿಸಿ ಕೊಟ್ಟುದೇ ಲಿಂಗ, ಇವೇ ಇಷ್ಟಲಿಂಗ ಸಕಲ ಲೋಕ ಒಡೆಯನಾದ ನಿರಾಕಾರ ಪರಬ್ರಹ್ಮವೇ ಲಿಂಗರೂಪವಾಗಿದೆ. ಅದು ಸಕಲ ಬ್ರಹ್ಮಾಂಡಗಳ ಸಕಲ ತತ್ವಗಳ ಸ್ಥಾಯೀ ಭೂತವು. ಅವೆಲ್ಲವುಗಳನ್ನು ತನ್ನಲ್ಲಿ ಅಡಗಿಸಿಕೊಳ್ಳ ತಕ್ಕದ್ದೂ ಆಗಿದೆ. ಆದ್ದರಿಂದ ಸ್ಥಲವೆಂದು ಕರೆಯಲ್ಪಟ್ಟಿದೆ. ಅದು ಓಂಕಾರ ಸ್ವರೂಪವು ಆಗಿದೆ. ಗುರುವಿನ ಉಪದೇಶದಂತೆ ಸದಾ ದೇಹದ ಮೇಲೆ ಧರಿಸಿ ಇಷ್ಟ ಪ್ರಾಣ ಭಾವಲಿಂಗಗಳ ಸಂಬಂಧದಿಂದ ಧ್ಯಾನಿಸಿ ಸ್ತುತಿಸಿ ಪೂಜಿಸುವುದು ವೀರಶೈವನ ಸರ್ವಾಂಗದಲ್ಲೂ ವ್ಯಾಪಿಸಿರುವುದು.

**3. ಜಂಗಮ:-** ಲಿಂಗದ ನಿಜಜ್ಞಾನವನ್ನು ಅರುಹಿ ಲಿಂಗವು ಲಿಂಗದೊಡ ಸಮರಸವಾಗುವ ಪರಿಯನ್ನು ತಿಳಿಸುವವನು ಗುರುವಾದರೆ ಗುರು ಹೇಳಿದಂತೆ ಶಿಷ್ಯ ನಡೆಯುವನೇ ಇಲ್ಲವೇ ಎಂಬುದನ್ನು ಪರೀಕ್ಷಿಸಿ ತಪ್ಪು ನೆಪ್ಪುಗಳನ್ನು ಸರಿಪಡಿಸ ಪೂಜೆಗೊಂಡು ಪಾದೋದಕ ಪ್ರಸಾದವನ್ನು ಅನುಗ್ರಹಿಸುವವನು ಜಂಗಮನು ಪ್ರಸಾದ ಭೋಗ ಮೂರ್ತಿ.

ಭಕ್ತನು ಗುರುವಿಗೆ ತನುವನು ಲಿಂಗಕ್ಕೆ ಮನವನ್ನು ಜಂಗಮಕ್ಕೆ ಧನವನು (ಅರ್ಥ ಪ್ರಾಣ ಅಭಿಮಾನಗಳನ್ನು) ಅರ್ಪಿಸಬೇಕು.

**4. ಭಸ್ಮ :-** ಭಸ್ಮವು ಶಿವನ ಮೈ ಬೆಳಗು. ಮೂರು ಎಸಳುಗಳುಳ್ಳದಾದ್ದರಿಂದ ತ್ರಿಪುಂಡವೆನಿಸಿದೆ, ಮೂರು ಮೂಲಗಳು ನಾಶವಾಗುವುದರ ಗುರುತು ಇದು ಶಿವ ಜ್ಯೋತಿ ಸ್ವರೂಪವೂ ಆಗಿರುವುದಲ್ಲದೇ ಐಶ್ವರ್ಯ ಪ್ರದವೂ ಆಗಿದೆ. ರೋಗ ರುಜ ನಾದಿಗಳ ಭೂತಪ್ರೇಮಿಗಳ ಭಯವನ್ನು ದೂರ ಮಾಡುತ್ತವೆ.

**5. ರುದ್ರಾಕ್ಷಿ:-** ರುದ್ರಾಕ್ಷಿಯು ಶಿವನ ಚಕ್ಷುವಿನಿಂದ ಉದಯವಾದುದು. ಇವನು ಧರಿಸಿರುವುದರಿಂದ ಅನಂತ ಪಾಪಗಳು ತೊಲಗುವುದಲ್ಲದೆ, ಶಿವಪದ ಪ್ರಾಪ್ತಿಗೆ ಇದು ಸಾಧಕವಾಗಿರುವುದು ಶಿವಜ್ಞಾನವನ್ನುಂಟುಮಾಡುವುದು.

**6. ಮಂತ್ರ :-** ಶ್ರೀ ಗುರುವಿನಿಂದ ಬೋಧಿಸಲ್ಪಟ್ಟ ಷಡಕ್ಷರ, ಮಹಾಮಂತ್ರ, ಅದು ಶಿವನಾಮ. ಗುರು ಹೇಳಿದ ರೀತಿಯಲ್ಲಿ ಜಪಿಸಬೇಕು. ಅದು ಶಿವಜೀವ ಐಕ್ಯವನ್ನು ಬೋಧಿಸುವುದಾಗಿದೆ.

**7. ಪಾದೋದಕ :-** ಗುರುಜಂಗಮರ ಪಾದ ತೀರ್ಥವೇ ಪಾದೋದಕ. ಪರಿಶುದ್ಧ ಕ್ರಿಯೆಯಿಂದ ಪಡೆದ ಪಾದೋದಕದಲ್ಲಿ ಜ್ಞಾನಾಗ್ನಿಯೂ ಕೂಡಿರುತ್ತದೆ. ಅದನ್ನು ಭಕ್ತಿಯಿಂದ ಸೇವಿಸುವುದರಿಂದ ಶಿವಜ್ಞಾನವು ಅಳವಡುವುದು, ಸಕಲ ಪಾಪಗಳೂ ಪರಿಹಾರವಾಗುವುವು. ಪಾದೋದಕವು ಹತ್ತು ವಿಧವಾಗಿದೆ.

**8. ಪ್ರಸಾದ :-** ಗುರು ಲಿಂಗ ಜಂಗಮಕ್ಕೆ ಅರ್ಪಿಸಿ ಅವರ ಕೃಪೆಯಿಂದಕೊಟ್ಟುದೇ ಪ್ರಸಾದ. ಪದಾರ್ಥವು ರೂಪು ರುಚಿ ತೃಪ್ತಿಗಳನ್ನು ಇಷ್ಟ ಪ್ರಾಣ ಭಾವಲಿಂಗಗಳಿಗೆ ಅರ್ಪಿಸಿ ಪಡೆದ ಶೇಷವೇ ಪ್ರಸಾದ. ಇದು ಶಿವಪ್ರಸನ್ನತೆಯನ್ನುಂಟುಮಾಡುವುದು ಗುರು, ಲಿಂಗ, ಜಂಗಮರಿಗೆ ಅರ್ಪಿಸಿ ಪಡೆದ ಪ್ರಸಾದವು ಶುದ್ಧ ಸಿದ್ಧ ಪ್ರಸಾದವೆನಿಸಿದೆ, ಪ್ರಸಾದವು ಹನ್ನೊಂದು ತೆರನಾಗಿದೆ. ಬಹಿರಂಗದ ಅಷ್ಟಾವರಣಗಳ ಆಚರಣೆಗಳಿಂದಲೇ ಅಂತರಂಗದ ಅಷ್ಟಾವರಣಗಳು ಸಿದ್ಧಿಸುವವು.

**ವಿಶೇಷ ವಿಷಯ:**- ಗುರುಲಿಂಗ ಜಂಗಮರು ಒಬ್ಬನೇ ಆದ ಪರಮಾತ್ಮನ ತ್ರಿವಿಧ ಮೂರ್ತಿಗಳು, ಶ್ರೀ ಗುರುವು ಶಿಷ್ಯನ ಅಜ್ಞಾನ ಗ್ರಂಥಿಯನ್ನು ಕತ್ತರಿಸಿ ಜ್ಞಾನೋಪದೇಶ ಮಾಡಿ, ಆತನ ಮೋಕ್ಷಕ್ಕೆ ಕಾರಣನಾಗಿದ್ದಾನೆ. ಶಿಷ್ಯನ ಅನು-ಗ್ರಹಾರ್ಥವಾಗಿ ಬಂದ ಶಿವನ ಸಾಕಾರ ಮೂರ್ತಿ, ಗುರುವು ಚೈತನ್ಯಾತ್ಮನು, ಶಾಶ್ವತನು, ಶಾಂತನು, ನಿರಂಜನನು ನಾದಬಿಂದು ಕಳಾತೀತನು ನಗರೋರಧಿಕಂ, ಗುರುವಿಗಿಂತ ಅಧಿಕವಾದುದು ಇನ್ನಿಲ್ಲ, ಗುರುವಿನಿಂದ ಅನುಗ್ರಹಿಸಲ್ಪಟ್ಟ ಲಿಂಗವನ್ನು ದೇಹದಿಂದ ಅಗಲಿರಬಾರದು. ಅದು ಅವನ ಪ್ರಾಣ ಸ್ವರೂಪ. ಸಕಲ ಇಷ್ಟಾರ್ಥ ಪ್ರದವಾದುದು. ಲಿಂಗವಲ್ಲದೆ ಅನ್ಯವಾದುದನ್ನು ಪೂಜಿಸಲಾಗದು. ಲಿಂಗಾಂಗಿಗೆ ಅನ್ಯದೇವತಾ ಭಜನೆ ನಿಷ್ಫಲವಾದುದು. ಜಂಗಮವು ಜ್ಞಾನ ಸ್ವರೂಪವಾಗಿದೆ. ಲಿಂಗಕ್ಕೆ ಜಂಗಮವೇ ಆದಿ ಮಧ್ಯಾಂತರಹಿತನು, ನಿತ್ಯ ಪರಿಪೂರ್ಣನು. ನಿರಾಮಯನು, ಸಗುಣ ನಿರ್ಗುಣನು ಸಚ್ಚಿದಾನಂದ ರೂಪನು. ಜಂಗಮದ ಸನ್ನಿಧಿಯಲ್ಲಿ ಗುರುವು ಶಿಷ್ಯನಿಗೆ ದೀಕ್ಷಾ ಕಾರ್ಯವನ್ನು ಮಾಡುತ್ತಾನೆ. ಭಕ್ತನು ತನ್ನ ದೇಹ ಶ್ರಮದಿಂದ ಗುರುಸೇವೆ ಮಾಡಬೇಕು. ಮನಸ್ಸನ್ನು ಲಿಂಗದಲ್ಲಿರಿಸಬೇಕು, ಧನವನ್ನು ಜಂಗಮಕ್ಕೆ ಅರ್ಪಿಸಬೇಕು. ಭಸ್ಮವು ಕಾಲಕಾಮರನ್ನು ಸುಟ್ಟುದರಪ್ರತೀಕವಾಗಿದೆ. ರುದ್ರಾಕ್ಷಿಗಳನ್ನು ಧರಿಸುವು-ದರಿಂದ ಪವಿತ್ರನಾಗುವನು. ಗುರುವಿನಿಂದ ಬೋಧಿಸಲ್ಪಟ್ಟ ಪರಮ ಪವಿತ್ರವಾದ ಮಂತ್ರಸ್ಮರಣೆಯು ಭಕ್ತನ ಮನಸ್ಸನ್ನು ಪರಮಾತ್ಮನಲ್ಲಿ ಸದಾ ವಿಲೀನಗೊಳ್ಳುವಂತೆ ಮಾಡುತ್ತದೆ. ಗುರುಪಾದೋಕದಿಂದ ಸಂಚಿತವೆಂಬ ಜನ್ಮಾರಭ್ಯ ಬಂದಿರುವ ಅಜ್ಞಾನವು ತೊಲಗಿ ಸುಜ್ಞಾನವು ನೆಲೆಗೊಳುವುದು. ಲಿಂಗಪಾದೋದಕವು ಪ್ರಾರಬ್ಧವೆಂಬ ಐಹಿಕ ಭೋಗ ರೂಪವಾದ ವಿಷಯಾದಿಗಳ ದೋಷವನ್ನು ತೊಲಗಿಸಿ ಲಿಂಗಾಗ ಸಾಮರಸ್ಯ ಸುಖವನ್ನೀಯುವುದು. ಜಂಗಮಪಾದೋದಕವು ಆಗಾಮಿಯನ್ನು ಪರಿಹರಿಸಿ ಭವಭವಾಂತರಗಳ ಇಹಪರಗಳ ಅಲೆದಾಟವನ್ನು ತಪ್ಪಿಸುವುದು. ಶಿವ-ಪ್ರಾಸಾದ ಸೇವೆಯಿಂದ ಆರೋಗ್ಯಾದಿ ಶಾರೀರಕ ಸಂಪತ್ತು ಲಭಿಸುವುದು. ಅಂತಃ ಕರಣವು ಪರಿಶುದ್ಧವಾಗುತ್ತದೆ. ಅಜ್ಞಾನವು ತೊಲಗಿ ಶಿವಜ್ಞಾನ ನೆಲೆಗೊಂಡು ಶಾಶ್ವತ ಸುಖವು ಲಭಿಸುತ್ತದೆ.

## ಪಂಚಾಚಾರಗಳು

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಮತ್ತು ಭೃತ್ಯಾಚಾರ ಇವೇ ಪಂಚಾಚಾರಗಳು. ಇವು ವೀರಶೈವರ 'ಪ್ರಾಣ' ಸ್ವರೂಪವಾಗಿವೆ.

1) **ಲಿಂಗಾಚಾರ:** ಇಷ್ಟಲಿಂಗವನ್ನು ದೇಹದಮೇಲೆ ಸದಾಧರಿಸ ಬೇಕು. ಇಷ್ಟಲಿಂಗ-ವನ್ನೂ ಗುರು ಜಂಗಮರನ್ನೂ ಪೂಜಿಸಬೇಕು. ಲಿಂಗಗುಣಗಳನ್ನು ತನ್ನಲ್ಲಿ ಅಳವಡಿಸಿ-ಕೊಳ್ಳಬೇಕು. ಅನ್ಯದೇವತೆಗಳನ್ನು ಭಜಿಸಬಾರದು.

2) **ಸದಾಚಾರ:** ಸದ್ಗುಣಗಳಿಂದ ಕೂಡಿ ಲಿಂಗನಿಷ್ಠೆಯಿಂದಿರುವುದಲ್ಲದೆ ಸತ್ಯ ಶುದ್ಧ ಕಾಯಕವನ್ನು ಮಾಡಿ ಗುಣಗಳಿಸಿ ಗುರು ಲಿಂಗ ಜಂಗಮ ಸೇವೆ ಮಾಡಬೇಕು. ಇದರಿಂದ ತನಗೂ ತನ್ನ ಸಮಾಜಕ್ಕೂ ರಾಷ್ಟ್ರಕ್ಕೂ ಹಿತವಾಗುವುದು.

3) **ಶಿವಾಚಾರ:** ವೀರಶೈವರೆಲ್ಲರೂ ಶಿವಸ್ವರೂಪರೆಂದು ತಿಳಿದು ಅವರಲ್ಲಿ ಕುಲ, ಕಸುಬು, ಹೆಚ್ಚು ಕಡಿಮೆಯನ್ನೆಣಿಸದಿರಬೇಕು. ಬಳಿಕ ಭೋಜನ ಶರೀರ ಸಂಬಂಧ-ಗಳನ್ನು ನಡೆಸಬೇಕು.

4) **ಗಣಾಚಾರ:** ಶಿವನಿಂದೆ ಶಿವಭಕ್ತರ ದೂಷಣೆಗಳನ್ನು ಕಿವಿಗೊಟ್ಟು ಕೇಳಬಾರದು. ಅದನ್ನು ತಪ್ಪಿಸಲು ಸರ್ವಪ್ರಯತ್ನವನ್ನು ಮಾಡಬೇಕು. ಪ್ರಾಣಾಂತ್ಯದವರೆಗೂ ಲಿಂಗನಿಷ್ಠೆಯಿಂದಿರುವೆನೆಂಬ ಛಲಬೇಕು.

5) **ಭೃತ್ಯಾಚಾರ:** ಶಿವಭಕ್ತರೆಲ್ಲರೂ ಪೂಜ್ಯರೆಂದು ತಿಳಿದು ಅವರಲ್ಲಿ ಕಿಂಕರ ಭಾವದಿ ನಡೆದುಕೊಳ್ಳಬೇಕು. ಅವರ ಸೇವೆ ಮಾಡಲು ಸಿದ್ಧನಾಗಬೇಕು.

**ಚನ್ನಬಸವೇಶ್ವರರ ವಚನ:**

ಲಿಂಗವೇ ಪರವೆಂದರಿದು ಅನ್ಯದೇವರ ಭಜನೆಯಿಲ್ಲದಿಪ್ಪುದೇ ಲಿಂಗಾಚಾರ ಸತ್ಕ್ರಿಯೆಯಿಂದ ಧನ ಸಂಪಾದಿಸಿ, ಗುರುಲಿಂಗಜಂಗಮ ದಾಸೋಹದಾನ.

ಪರೋಪಕಾರ ಮಾಡುವುದೇ ಸದಾಚಾರ ಅಂಗದ ಮೇಲೆ ಲಿಂಗವಿರ್ಪ ಶಿವ
ಭಕ್ತನೇ ಶಿವರೂಪವೆಂದು ಅವರ ಮುಂದಿರುವ ಪೊಕ್ಕು ಮಿಕ್ಕುದ ನಂಬುದೇ ಶಿವಾಚಾರ
ಶಿವನಿಂದೆಯ ಕಿವಿಗೊಟ್ಟು ಕೇಳದಿಪ್ಪುದೇ ಗಣಾಚಾರ
ಶಿವಭಕ್ತರ ಶಿಶುವು ತೊಟ್ಟಿಲಲ್ಲಿರ್ಪುದ ಕುಂಡು ಯಜಮಾನನೆಂದರಿದು
ನಮ್ರಭಾವದಿಂ ನಡೆದುಕೊಳ್ಳುವುದೇ ಭೃತ್ಯಾಚಾರ

ಇಂತೀ ಪಂಚಾಚಾರ ಸಂಯುಕ್ತನಾಗಿ ನಡೆಯುವ ಶಿವಭಕ್ತನೊಕ್ಕು ಮಿಕ್ಕು ದಿನಿಕ್ಕಿ ಸಲಹೋ ಕೂಡಲ ಚನ್ನಸಂಗಮದೇವ.

**ಷಟ್‌ಸ್ಥಲಗಳು :-** ಷಟ್‌ಸ್ಥಲಗಳು ವೀರಶೈವನ ಆತ್ಮಸ್ವರೂಪವಾಗಿವೆ ಭಕ್ತನು ಷಟ್‌ಸ್ಥಲಾಚರಣೆಯಿಂದಲೇ ಲಿಂಗಾಂಗಸಾಮರಸ್ಯವನ್ನು ಹೊಂದುವನು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಇವು ಷಟ್‌ಸ್ಥಲಗಳು. ಶಿವಯೋಗಾನುಷ್ಠಾನದಲ್ಲಿ ಇವು ಆರು ಮೆಟ್ಟಲುಗಳು.

1. **ಭಕ್ತ** :- ಗುರುವಿನಿಂದ ದೀಕ್ಷೆ ಪಡೆದ ಭಕ್ತನು ಇಷ್ಟಲಿಂಗ ಪೂಜಕನಾಗಿ ಶಿವ ಭಕ್ತರಲ್ಲಿಯೂ ಕಿಂಕುರ್ವಾಣತೆಯಿಂದ ನಡೆದುಕೊಳ್ಳಬೇಕು. ಸತ್ಯಶುದ್ಧ ಕಾಯಕದಿಂದ ಗುರುಲಿಂಗ ಜಂಗಮ ಸೇವೆ ಮಾಡಬೇಕು. ಮನವನ್ನು ಲಿಂಗಧ್ಯಾನದಲ್ಲಿ ತೊಡಗಿಸ ಬೇಕು. ಧನವನ್ನು ಜಂಗಮಕ್ಕರ್ಪಿಸಬೇಕು. ಭಕ್ತಿ, ಪ್ರೀತಿ, ದಯೆ, ಶಾಂತಿ, ಸತ್ಯ, ಕ್ಷೇಮ, ಅಹಿಂಸೆ, ಮೊದಲಾದ ಸದ್ಗುಣಗಳಿಂದ ಕೂಡಿರಬೇಕು.

2. **ಮಹೇಶ** :- ಆ ಭಕ್ತನೇ ವಿಶೇಷ ನಿಷ್ಠೆಯಿಂದ ಗುರು ಲಿಂಗ ಜಂಗಮದಲ್ಲಿ ಭಕ್ತಿಯನ್ನು ಆಚರಿಸಬೇಕು. ಪರಧನ, ಪರಸ್ತ್ರೀ, ಪರಹಿಂಸೆ, ಪರನಿಂದೆ, ಪರವಾಕ ಪರದೈವಗಳಿಂದ ದೂರನಾಗಿರಬೇಕು. ಶಿವಪೂಜೆ, ಶಿವಭಜನೆ, ಶಿವಾನುಭವ ಗೋಷ್ಠಿಗಳಲ್ಲಿ ವಿಶೇಷ ಆಸಕ್ತಿವಹಿಸಬೇಕು. ತನ್ನ ಆಚಾರದಲ್ಲಿ ನಿಷ್ಠೆಯಿರಬೇಕು.

3. **ಪ್ರಸಾದಿ** :- ಪ್ರಸಾದಿಯು ತಾನು ಸೇವಿಸುವ ಎಲ್ಲಾ ವಸ್ತುಗಳನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಿ ಶೇಷ ಪ್ರಸಾದವನ್ನು ಸ್ವೀಕರಿಸುವನು, ಕಣ್ಣಿನಿಂದ ನೋಡುವು ದನ್ನಾಗಲೀ, ಮೂಗಿನಿಂದ ವಾಸನೆ ನೋಡುವುದನ್ನಾಗಲಿ. ಕಿವಿಗಳಿಂದ ಕೇಳುವುದ ನ್ನಾಗಲೀ ನಾಲಿಗೆಯಿಂದ ರುಚಿ ನೋಡುವುದನ್ನಾಗಲೀ, ಮೃದು ಕಠಿನ ಶೀತೋಷ್ಣ ಸ್ಪರ್ಶ ಸುಖವನ್ನಾಗಲೀ ಲಿಂಗಮುಖವಾಗಿ ಅರ್ಪಿಸಿ ಪ್ರಸಾದರೂಪವಾಗಿ ಅನುಭವಿಸಿ ಲಿಂಗಭೋಗೋಪ ಭೋಗಿಯಾಗಿ ಶಿವಪ್ರಸನ್ನತೆಯನ್ನು ಪಡೆಯುವನು.

4. **ಪ್ರಾಣಲಿಂಗ** :- ಆ ಪ್ರಸಾದಿಯೇ ಈ ಸ್ಥಲಾಚರಣೆಯಲ್ಲಿ ಲಿಂಗವೇ ತನ್ನ ಪ್ರಾಣವೆಂದು ತನ್ನ ಪ್ರಾಣವೇ ಲಿಂಗವೆಂದೂ ಭಾವಿಸಿ ಪ್ರಾಣಲಿಂಗಿಯೆನಿಸುವನು. ದೇಹಕ್ಕೆ ಆಗುವ ಎಲ್ಲಾ ಕಷ್ಟ ಸುಖಗಳೂ ಪರಮಾತ್ಮನಿಂದ ಪರೀಕ್ಷಾರ್ಥವಾಗಿ ಬಂದುವೆಂದು ತಿಳಿದು ಲಿಂಗನಿಷ್ಠೆಯಿಂದಿರುವನು. ಅವನಲ್ಲಿ ಶಾಂತಿ, ವಿವೇಕ, ಸತ್ಯ, ಅಹಿಂಸೆ, ವೈರಾಗ್ಯ, ಮನಸ್ಸಿನ ಏಕಾಗ್ರತೆ, ನಿರಹಂಕಾರ, ವಿಶ್ವಬಂಧುತ್ವ ಮುಂತಾದ ಗುಣಗಳು ಸ್ಥಿರಪಡುತ್ತವೆ.

5. **ಶರಣ** :- ಆ ಪ್ರಾಣಲಿಂಗಿಯೇ ಶರಣನಾಗಿ, ತಾನೇ ಸತಿ ಪರಮಾತ್ಮನೇ ಪತಿ ಎಂಬ ಭಾವನೆಯಿಂದ ಲಿಂಗಮೂರ್ತಿಯ ಪೂಜೆ ಧ್ಯಾನಗಳಿಂದ ಆನಂದವನ್ನು ಅನುಭವಿಸುವನು ಎಲ್ಲವನ್ನು ಇಡೀ ವಿಶ್ವವನ್ನೇ ಶಿವಸ್ವರೂಪವೆಂದು ಭಾವಿಸಿ ತಾನು ಕಿಂಕರನಾಗಿ ನಡೆಯುವನು. ನೀನೇ ರಕ್ಷಕನೆಂದು ಪರಮಾತ್ಮನನ್ನು ಮರೆಹೋಗುವನು.

6. **ಐಕ್ಯ** :- ಐಕ್ಯಸ್ಥಲದಲ್ಲಿ ಶರಣನ ಆತ್ಮವು ಲಿಂಗದಲ್ಲಿ ಬೆರೆತು ಹೋಗುತ್ತದೆ. ಎಲ್ಲವೂ ಪರಮಾತ್ಮ ಸ್ವರೂಪವೇ ಆಗಿರುತ್ತದೆ. ಜ್ವಾಲೆಯೂ ಕರ್ಪೂರವೂ ಕೂಡಿ ಅಡಗುವಂತೆ ಪ್ರಾಣವೂ ಮನಸ್ಸೂ ಲಿಂಗದಲ್ಲಿ ಕೂಡಿ ಒಂದಾಗುತ್ತದೆ.

## ವಚನಗಳು

1. ಸದಾಚಾರದಲ್ಲಿ ನಡೆಯುವುದು, ಶಿವನಲ್ಲಿ ಭಕ್ತಿಯಾಗಿರುವುದು ಲಿಂಗ ಜಂಗಮ ಬಂದರೆ ಸಂತೋಷ ಬುದ್ಧಿಯಾಗಿರುವುದು. ಲಾಂಛನಧಾರಿಗಳ ಕಂಡರೆ ವಂದಿಸುವ ಇದು ಭಕ್ತಿಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವ.

2. ಪರಸ್ತ್ರೀ ಪರಧನದಾಸೆಯ ಬಿಟ್ಟು ಶುದ್ಧವಾಗಿ ಲಿಂಗ ನಿಷ್ಠೆಯುಳ್ಳಾತನ ಮಹೇಶ್ವರ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

3. ಲಿಂಗಪ್ರಸಾದ ನೆನಹಿನಿಂದ ಭೋಗಿಸುವುದೇ ಅರ್ಪಿತ, ಅನರ್ಪಿತನ ಬಿಡುವುದೀ ಪ್ರಸಾದಿಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

4. ಪ್ರಾಣವೇ ಲಿಂಗವಾಗಿ ಲಿಂಗವೇ ಪ್ರಾಣವಾಗಿ, ಸುಖ ದುಃಖ ಉಭಯ ತನ್ನಗಿಲ್ಲದಿಹುದೀಗ ಪ್ರಾಣಲಿಂಗಿ ಸ್ಥಳಾನೋಡಾ ಅಪ್ರಮಾಣ ಕೂಡಲಸಂಗಮದೇ

5. ಲಿಂಗವೇ ಪತಿಯಾಗಿ ತಾನು ಸತಿಯೆಂಬ ಭಾವದಲ್ಲಿ ಆಚರಿಸಿ ಪಂಚೇಂದ್ರಿಯ ಸುಖ ಬಯಸದಿಹುದೀಗ ಶರಣಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವ

6. ಕ್ಷೀರದೊಳಗಣ ಘೃತದಂತೆ, ತಿಲದೊಳಗಣ ತೈಲದಂತೆ ಪುಷ್ಪದೊಳಗಣ ಪರಿಮಳದ ಉಪ್ಪು ಉದಕವ ಕೂಡಿದಂತೆ ಮನ ಲಿಂಗದಲ್ಲಿ ಲೀನವಾಗಿಹುದೀಗ ಐಕ್ಯ ಸ್ಥ ನೋಡ ಅಪ್ರಮಾಣ ಕೂಡಲಸಂಗಮದೇವಾ.

ಭಕ್ತನು ದೇಹಾಭಿಮಾನವನ್ನು ಬಿಟ್ಟು ಎಲ್ಲವನ್ನೂ ಪರಮಾತ್ಮನಿಗೆ ಎಂದ ಸ್ವರೂಪವಾದ ಗುರು-ಲಿಂಗ-ಜಂಗಮಕ್ಕೆ ಅರ್ಪಿಸುತ್ತಾನೆ. ಮಹೇಶ್ವರ ಸ್ಥಲವ ಆಚರಣ ಯುಳ್ಳ ಭಕ್ತನ ಚಿತ್ತ ಶುದ್ಧಿಯುಳ್ಳವನಾಗುತ್ತಾನೆ. ಮತ್ತು ಅನ್ಯರ ಪದಾರ್ಥಗಳೆನಿಸಿ ಪರದ್ರವ್ಯ ಪರಸ್ತ್ರೀ ಚಿಂತನೆ ಮುಂತಾದವುಗಳ ಕಡೆಗೆ ಗಮನ ಕೊಡದೆ ಆ ಬಗ್ಗೆ ದೃ ನಂಬುಗೆಯುಳ್ಳವನಾಗುತ್ತಾನೆ. ಪ್ರಸಾದಿಯು ಎಲ್ಲವನ್ನೂ ಶಿವರೂಪಿಯಾದ ಗುರು ಲಿಂಗ ಜಂಗಮಕ್ಕೆ ಅರ್ಪಿಸಿ ದಯೆಯಿಂದ ಬಂದ ಶಿವ ಪ್ರಸಾದದ ಸೇವನೆಯಿಂ ಬದುಕುವನು. ಪ್ರಾಣಲಿಂಗಿಯು ತನ್ನ ಪ್ರಾಣವನ್ನು ಲಿಂಗಕ್ಕೆ ಅರ್ಪಿಸಿ ಲಿಂಗವೆ ಪ್ರಾಣವೆಂದು ತಿಳಿದು ಆಚರಿಸುವನು. ಶರಣನು ತಾನು ಸತಿಯೆಂತಲೂ ಲಿಂಗವ ಪತಿ ಎಂದು ಭಾವಿಸಿ ಶರೀರ ಪ್ರಾಣಾಭಿಮಾನಗಳನ್ನೆಲ್ಲವನ್ನೂ ಪರಮಾತ್ಮನಿಗೆ ಕಿಂಕ ರತ್ವದಿಂದ ಅರ್ಪಿಸುತ್ತಾನೆ. ಅಂಗ ಲಿಂಗ ಎಂಬ ಭಿನ್ನತೆಯಿಲ್ಲದೆ ಪರಮಾತ್ಮನಲ್ಲಿ ಒಂದಾ ಲಿಂಗವೇ ಆಗುವ ಸ್ಥಿತಿಯನ್ನು ಪಡೆದಾಗ ಭಕ್ತನು ಐಕ್ಯನೆನಿಸುತ್ತಾನೆ.

ಈ ಆರೂ ಸ್ಥಲಗಳಲ್ಲೂ ಭಕ್ತನು ಕ್ರಮವಾಗಿ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಸಾವಧಾನಭಕ್ತಿ, ಅನುಭಾವಭಕ್ತಿ ಮತ್ತು ಸಮರಸಭಕ್ತಿ ಎಂಬ ಆರು ತೆರನಾದ ಭಕ್ತಿಮಾರ್ಗವನ್ನು ಅನುಸರಿಸಿ ನಡೆಯುತ್ತಾನೆ. ತಾನು ಶಿವನೆಂಬ ನಂಬುಗೆ ಶ್ರದ್ಧಾಭಕ್ತಿ ಆ ನಂಬುಗೆಯ ದೃಢ ಭಾವನೆಯ ಆಚರಣೆಯು ನಿಷ್ಠಾಭಕ್ತಿ, ತಾನು ಶಿವನೆಂಬುವರ ಗಮನದೊಡನೆ ಸದಾ ಇರುವುದು ಅವಧಾನ ಭಕ್ತಿ, ತನ್ನ ಪ್ರಾಣವೇ ಲಿಂಗವೆಂದು ಆ ಲಿಂಗವನ್ನು ಅನುಸರಿಸಿ ನಡೆಯುವುದು ಅನುಭಾವ ಭಕ್ತಿ, ಎಲ್ಲವನ್ನೂ ಅರ್ಪಿಸಿ ಸಂತೋಷದಿಂದಿರುವುದೇ ಆನಂದಭಕ್ತಿ, ಶಿವನೊಡನೆಕೂಡಿ ಭಿನ್ನತೆಯನ್ನು ಮರೆದು ಶಿವನೇ ತಾನಾಗಿ ನಡೆಯುವುದೇ ಸಮರಸಭಕ್ತಿ. ಒಟ್ಟಿನಲ್ಲಿ ದೇಹವೂ ಅಲ್ಲದೆ ಸರ್ವವೂ ಶಿವನಿಗೆ ಅರ್ಪಿತನಾಗಿ ತಾನೆ ಶಿವನಾಗುವ ಸ್ಥಿತಿಯು ಷಟ್‌ಸ್ಥಲಾಚರಣೆಯಿಂದ ಉಂಟಾಗುತ್ತದೆ. ಇವೆಲ್ಲವೂ ಒಂದೇ ಜನ್ಮದಲ್ಲಿ ಉಂಟಾಗುತ್ತವೆ. ಈ ಆರು ಸ್ಥಲ-ಅಂಗಸ್ಥಲ, ಲಿಂಗಸ್ಥಲ, ಎಂಬ ಎರಡು ತೆರದಿಂದ ಭಕ್ತನ ಆಚರಣೆಯ ನೂರೊಂದು ಸ್ಥಲ ಸಕೀಲ ಸಂಬಂಧಗಳಾಗುವುವು.

---

# ಬಸವಣ್ಣನವರ ವಿಶ್ವಮಾನ್ಯ ತತ್ವಗಳು

ಲೇಖಕರು :- ವ್ಹಿ. ಸಿ. ಅಂದಾನಿ, ಗೋಕಾಕ, ಬೆಳಗಾವಿ-ಜಿಲ್ಲೆ.

ಸುಜ್ಞಾನ ಸಂಕ್ರಾಂತಿಯ ಸಮ್ಮಿಲನ ಸಮರಸ ಅನುಭವದ ತೃಪ್ತಿಯನ ಹೊಂದಿದವರೆ ಶರಣರು. ಶರಣ ಶಿರೋಮಣಿಯೆಂದೆನಿಸಿದ ಮಹಾನುಭಾವಿ ಬಸವ ನವರು ಸಾತ್ವಿಕ ಮಾರ್ಗದಿಂದ ಸಾರ್ಥಕ ಜೀವನವನ್ನು ಸಾಗಿಸಿ ಜಗಜ್ಯೋ ಯಾದರು. ಮಹಾನುಭಾವರಾದ ಬಸವಣ್ಣನವರು ಮಾಡಿದ ಮಹಾಕಾಯ ಗಳಲ್ಲಿ ಶಿವಾನುಭವ ಮಂಟಪದ ಸ್ಥಾಪನೆ ಪ್ರಾಮುಖ್ಯವಾದುದು ಧರ್ಮದ ಏಳ್ಗೆಗ ಆತ್ಮ ಸಂತೃಪ್ತಿಯನ್ನು ಪಡೆಯಲು ಬಸವಣ್ಣನವರ ಮನೋಭೂಮಿಯಂತೆ ದಿ ಜ್ಞಾನಿ ಅಲ್ಲಮ ಪ್ರಭುದೇವರ ಹಿರಿತನದಲ್ಲಿ ನೈತಿಕ ಧಾರ್ಮಿಕ ಆಧ್ಯಾತ್ಮಿಕ ಉ ತತ್ವಗಳಿಗೆ ಸಾರ್ವತ್ರಿಕ ಕ್ರಿಯಾತ್ಮಕ ಸ್ವರೂಪವನ್ನೀಯುವ ಶಿವಾನುಭವ ಮಂಟ ಸ್ಥಾಪನೆಯಾಗಿ ಅದರಲ್ಲಿ ಶರಣರ ವಚನಗಳು ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀ ಹೊಂದಿ ಮಾನವ ಕುಲಕ್ಕೆ ಅನುಪಮ ಕಾಣಿಕೆಯಾಗಿರುವವು. ಮಾನ ಸರ್ವತೋಮುಖ ಉನ್ನತಿಗಾಗಿ ಬಸವಣ್ಣನವರು ಕೈಗೊಂಡ ಕಾರ್ಯ ತತ್ಪರತೆ ಅ ನಡೆದು ಬಂದ ದಾರಿ ಮೊದಲಾದ ಉದಾತ್ತ ತತ್ವಗಳು ಆದರ್ಶಗಳೆಂದು ಪರಿ ಸುವಲ್ಲಿ ಅವರ ವಚನಗಳು ಜೀವಂತ-ಸಾಕ್ಷಿ ನುಡಿಯುತ್ತವೆ. ಬಸವಾದಿ ಶರ ಮಾಡಿಕೊಂಡದ್ದು ಶೂನ್ಯ ಸಂಪಾದನೆ. ಶೂನ್ಯವೆಂಬುದು ಪ್ರಜ್ಞಾನ ನಿಗು ಪರಬ್ರಹ್ಮ ದೇವನೊಂದಿಗೆ ತಾನೊಂದಾಗುವ ದಿವ್ಯಾನುಭವದ ಮೊತ್ತವೇ ಶ ಮಾನವನು ತಾನು ತನ್ನ ಅರುವಿನಿಂದ ಪೂರ್ಣತೆಯನ್ನು ಹೊಂದುವುದೇ ಶ ಸಂಪಾದನೆ. ಆಧ್ಯಾತ್ಮ ಜೀವನದ ರಹಸ್ಯವೇ ಶೂನ್ಯ ಸಂಪಾದನೆಯ ಸಾರಸ ನಿರ್ಮಲ ನಿಸ್ವಾರ್ಥ ಪ್ರೇಮವೇ ನಿರಂಜನ ಪ್ರೇಮದ ಸಾಧನೆ, ಸದ್ವಿನಯವೇ ಶಿವನ ಒಲುಮೆ, ಭಕ್ತಿ ಮಾಡುವವ ಮಾತ್ರವೇ ಭಕ್ತನಲ್ಲ ಭಕ್ತರಿಗೆ ಕೈ ಮುಗಿ ವವನೂ ಭಕ್ತನು. ಸದ್ಗುಣ ಸಂಪತ್ತು ಸಹೃದಯತೆ ಅಳವಟ್ಟುದುದೇ ಸುಜ್ಞಾ ಲಕ್ಷಣ, ದಯವೇ ಧರ್ಮದ ಮೂಲ, ಮೃದುವಚನವೇ ಸಕಲ ಜಪ ತಪ ದಾಸೋಹಂಭಾವವು ಜೀವನದ ಸಾರಸರ್ವಸ್ವ, ಕಾಯಕವೇ ಕೈಲಾಸ ಹೀಗೆ ಧರ್ಮ-ನೀತಿ-ನಿರ್ಮಲತೆ ಆಚಾರ-ವಿಚಾರ ತತ್ವಗಳನ್ನು ಭಕ್ತಿ ಭಂಡಾರಿ ಬಸವ ಸಂಪಾದನೆಯಿಂದ ಕಂಡುಕೊಳ್ಳಬಹುದು.

ಬಸವಣ್ಣನವರ ಅನುಭವದಂತೆ ಯಾವುದೇ ಕಾಯಕವು ಕಾಯ ಬೇಕಾದರೆ ಸದ್ಭಾವ ಸತ್ಯನುಡಿ ಸದ್ವೃತ್ತಿಯ ಬೆಸುಗೆಯಲ್ಲಿರಬೇಕೆಂದು ಪ್ರತಿ ದರು. ಕಾಯಕದಲ್ಲಿ ಎಲ್ಲ ಕಾಯಕದವರಿಗೂ ಸಮಾನ ಸ್ಥಾನವನ್ನು ಕಲ್ಪಿಸಿಕೊ ಒಬ್ಬರ ಮನಕ್ಕೆ ತೋರದರೆ ಕೊಡದೆ ತನ್ನ ನಿತ್ಯ ಜೀವನಕ್ಕಾಗಿ ಸತ್ಯವಾ

ಸಿದ್ಧ

ಪ್ರಾಮಾಣಿಕವಾಗಿಯೂ ಮಾಡುವ ಕ್ರಿಯೆಯೇ ಕಾಯಕವೆಂದು ಅರುಹಿದ್ದಾರೆ. ಕಾಯಕವೇ ಕೈಲಾಸವೆಂಬುದನ್ನು ಮನಗಾಣಿಸಿಕೊಟ್ಟು ಆದರಿಂದ ಆರ್ಥಿಕ ಸಮತೆ-ಯನ್ನು ಸಮಾಜದಲ್ಲಿ ಬಿತ್ತರಿಸಿದರು. ಅನಾಚಾರಿಗಳಿಗಾಗಿ ತಳಮಳಗೊಂಡ ಬಸವಣ್ಣ-ನವರು ದಯವೇ ಧರ್ಮದ ಮೂಲವೆಂದು ಸಾರಿದರು. ಅಹಂಭಾವವನ್ನು ತೊರೆದು " ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ " ಅಂತಾ ತಾವೇ ಕೀಳೆಂದು ಹೇಳಿಕೊಂಡರು. ಮಾನವ ಧರ್ಮದಲ್ಲಿ ಗುಣಾತ್ಮಕ ದೃಷ್ಟಿ ಮುಖ್ಯ. ಜಾತಿ ಮತದ ಲಾಂಛನದಿಂದ ವ್ಯಕ್ತಿತ್ವವನ್ನು ಅಳೆಯಬಾರದೆಂಬುದನ್ನು ಮನಗಾಣಿಸಿಕೊಟ್ಟರು ಅಸ್ಪೃಶ್ಯತೆಯನ್ನು ಆ ಮೂಲಾಗ್ರ, ಕಿತ್ತುಹಾಕಿದರು. ಕಾಯಕದಿಂದಾಗಲಿ ವರ್ಣ-ದಿಂದಾಗಲಿ ಜಾತಿಯಿಂದಾಗಲಿ ಮೇಲು-ಕೀಳೆಂದು ಭಾವಿಸದೆ ಗುಣಗಳಿಂದ ವ್ಯಕ್ತಿತ್ವ-ವನ್ನು ಅಳೆಯಬೇಕೆಂಬ ಹಾಗೂ ಸಕಲ ಜೀವಾತ್ಮರಿಗೆ ಲೇಸನೇ ಬಯಸುವವರನ್ನು ಕುಲಜರೆಂದು ಹಾನಿಮಾಡುವವರನ್ನು ಅಂತ್ಯಜರೆಂದು ಮನ್ನಿಸಬೇಕೆಂಬ ಸಾಮಾಜಿಕ ಸಮತೆಯನ್ನು ತಂದರು. ಸ್ತ್ರೀ-ಪುರುಷ ಎಂಬ ಉಭಯ ಭೇದವನು ತೊಡೆದು ಹಾಕಿದರು. ಸಮಾಜದೊಳಗಿನ ವೈಷಮ್ಯವನ್ನು ಹೋಗಲಾಡಿಸುವ ಸಾಧನ ಮಾರ್ಗ-ಗಳನ್ನು ಸಾಧನೆಮಾಡಿ ಪತಿತರನ್ನು ಪಾವನಮಾಡಿ ಧಾರ್ಮಿಕ ಸಮಾನತೆಯನ್ನೂ ತರಲು ಹಲವಾರು ಪ್ರಯತ್ನ ಮಾಡಿದರು. ಸದಾಚಾರಿಗಳೇ ಕುಲಜರು. ಅನಾಚಾರಿಗಳೇ ಹೊಲೆಯರೆಂತಾ ಸಾರಿದರು. ರಾಜನೀತಿಯಲ್ಲಿ ಸಾಕಷ್ಟು ಸುಧಾರಣೆ ಮಾಡಿದರು ಬಸವಣ್ಣನವರು ಸಮಾಜದ ಉನ್ನತಿಗಾಗಿ ಹಿಂಸೆಯನ್ನು ತಡೆದು ಕುಲ-ಮದದ ಬೇರನ್ನೂ ಕಡಿದರು. ಢಂಬಾಚಾರಕ್ಕೆ ಢಾಂಬಿಕ ಭಕ್ತಿಗೆ ಮಹತ್ವ ಕೊಡಲಿಲ್ಲ. ಕುರುಡನಂಬಿಕೆಗಳನ್ನು ಪ್ರಜ್ಞಾಶೂನ್ಯ ಆಚಾರಣೆಗಳನ್ನೂ ಜೊಳ್ಳು-ನಂಬಿಕೆಗಳನ್ನು ಕಿತ್ತುಹಾಕಲು ಸಾಕಷ್ಟು ಪ್ರಯತ್ನ ಪಟ್ಟರು. ಆಡಂಬರದ ಬದಲಾ-ವಣೆಗಳಿಗಿಂತ ಭಾವಬದಲಾವಣೆ ಮೇಲೆಂದು ಮನಗಂಡರು. ಸಂಸಾರವನ್ನು ಅವರು ತಿರಸ್ಕರಿಸಲಿಲ್ಲ ಅದನ್ನು ಪವಿತ್ರವೆಂದು ಭಾವಿಸಿದರು. ರಾಷ್ಟ್ರದ ಭದ್ರತೆಗಾಗಿ ಸಮಾಜದ ಹಿತಕ್ಕಾಗಿ ಪ್ರಜಾಪ್ರಭುತ್ವದ ಉಳಿವಿಗಾಗಿ ಆರ್ಥಿಕ ಸಾಮಾಜಿಕ ಧಾರ್ಮಿಕ ಸಮಾ-ನತೆಗಳನ್ನು ತಂದು ಕೊಟ್ಟರು. ಬಸವಣ್ಣನವರ ಇಂಥ ಧ್ಯೇಯೋದ್ದೇಶಗಳನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡರೆ ಮಾತ್ರ ಪಡೆದ ಜನ್ಮ ಸಾರ್ಥಕ. ಅವರ ದಿವ್ಯ ಸಂದೇಶಗಳನ್ನು ಅನುಸರಿಸಿದವರೇ ಧನ್ಯರು.

ವಿಶ್ವಕಲ್ಯಾಣಕ್ಕಾಗಿ ಸಕಲ ಜೀವಾತ್ಮರ ಲೇಸನೆ ಬಯಸುವುದಕ್ಕಾಗಿ ಮಹಾನು-ಭಾವಿ ಜಗಜ್ಯೋತಿ ಬಸವಣ್ಣನವರು ಸಾಧಿಸಿದ ವಿಶ್ವಮಾನ್ಯ ಸತ್ಯಾ ತತ್ವಗಳನ್ನು-ವ್ಯಕ್ತಿಗತ ನೀತಿ, ಸಾಮಾಜಿಕ ಆರ್ಥಿಕ ಧಾರ್ಮಿಕ ಸಮಾನತೆ ಸಿದ್ಧಾಂತಗಳನ್ನೂ ಹಾಗೂ ಲೌಕಿಕ ಪಾರಮಾರ್ಥವನ್ನು ಏಕ ಕಾಲದಲ್ಲಿ ಸಾಧಿಸಿ ಜೀವನವನ್ನು ಉದ್ಧಾ-ತ್ತೀಕರಿಸಲು ಮಾರ್ಗದರ್ಶನ ಮಾಡಿದ್ದನ್ನು ಸ್ಮರಿಸಿ ಅವುಗಳನ್ನು ಜನ ಸಾಮಾನ್ಯರು

ತಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ತಮ್ಮ ಜೀವನವನ್ನು ಸಾರ್ಥಕ ಪಡಿ ಕೊಳ್ಳಲಿಕ್ಕೆ ಬಸವ ಜಯಂತಿ ಉತ್ಸವವನ್ನು ವಿಜೃಂಭಣೆಯಿಂದ ಆಚರಿಸುವುದು ರೂಢಿಯಲ್ಲಿದೆ. ನರಲೋಕವನ್ನು ಹರಲೋಕವನ್ನಾಗಿ ಮಾಡಿದ ಈ ಪುಣ್ಯ ಪುರು ಷನ ಜೀವನ ಸಂದೇಶವನ್ನು ನಾಡಿನ ಜನತೆಗೆ ತಿಳಿದು ಹೇಳುವ ಸಲುವಾಗಿ ಉತ್ಸವದ ಅಂಗವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುವುದು. ಬಸವಣ್ಣ ನವರ ಉದಾತ್ತ ತತ್ವಗಳನ್ನು ಅನುಸರಿಸಿದ್ದಾದರೆ ಬಸವ ಜಯಂತಿ ಹಬ್ಬವನ್ನು ಆಚರಿಸಿದಂತಾಗುವುದರಲ್ಲಿ ಯಾವ ಸಂದೇಹವಿಲ್ಲ.

ಶರಣರು ವಾಸಿಸುವ ಸ್ಥಳ ಪುಣ್ಯ ಕ್ಷೇತ್ರ. ಅವರು ನುಡಿದುದೇ ದೇವವಾಣಿ ಲೋಕದಂತೆ ಬಂದು ಲೋಕದಂತೆ ಇದ್ದು ಲೋಕದಂತೆ ಹೋಗುವವರು ನರರು. ಪುಣ್ಯದಂತೆ ಬಂದು ಜ್ಞಾನದಂತೆ ಇದ್ದು ಮುಕ್ತರಾಗಿ ಹೋಗುವವರು ಶರಣರು ದೇಹಭಾವ ಜೀವಭಾವಗಳಿಂದ ನೀಗಿ ಲಿಂಗಾಂಗ ಸಮರಸವನ್ನು ಹೊಂದಿದ ಶರಣರ ಅನುಭವವನ್ನು ತಿಳಿದುಕೊಂಡು ಆಚರಣೆಯಲ್ಲಿ ತಂದವರೇ ಧನ್ಯರು. ●

---

ನಿರಮಯ ನಿರಾಮಯಂ ನಿರಾಕುಳಂ,
ನಿರ್ದ್ವಂದ್ವಂ ನಿರ್ಮಳ ನಿಜಸ್ವರೂಪ,
ನಿರ್ಭಾವ ನಿಃಪುರುಷ ನಿರಂಜನ ನಿರಾಕಾರಂ,
ನಿರಾವರಣ ನಿರುಪಮ ನಿರ್ಗುಣ ನಿರಾಧಾರ ನಿರಾಲಂಬ,
ಸರ್ವಾಧಾರ ಸದಾಶಿವಂ ಅತ್ಯತಿಷ್ಟದ್ದಶಾಂಗುಲಂ ನಿತ್ಯ ನಿಶ್ಚಿತಂ,

ನಿರ್ಮಲ ನಿರ್ಮಾಯ ನಿರಾಳಕಂ,
ಹರಹರಾ ಶಿವಶಿವಾ ಜಯ ಜಯ ಜಯತು,
ಶರಣ ಕರಾಣಾಕರ ತ್ರಾಹಿಮಾಂ ಭಕ್ತಿ ವತ್ಸಲ
ಮತ್ರ್ರಾಣನಾಥ ಮಹಾಲಿಂಗಗುರು
ಶಿವಸಿದ್ಧೇಶ್ವರ ಪ್ರಭುವೇ.

# " ಯಾವುದು ಧರ್ಮ "

ಲೇಖಕಿ, ಶಾರದ ರಾಜಶೇಖರ್, 847, 4ನೇ ಮೈನ್, ವಿಜಯನಗರ, ಬೆಂಗಳೂರು-40.

ಧರ್ಮವೆಂಬುದು ಸಂಸ್ಕೃತಿಯ ಅಂತಸ್ತತ್ತ್ವ, ಸಾಮಾಜಿಕ ಸಂಘಟನೆಯೆಂಬ ದೇಹಕ್ಕೆ ಜೀವವಿದ್ದಂತೆ, ವೈಜ್ಞಾನಿಕ ಉಪಯೋಗಗಳು. ಆರ್ಥಿಕ ವ್ಯವಸ್ಥೆಗಳು, ರಾಜಕಾರಣ ಸಂಸ್ಥೆಗಳು ಇವೆಲ್ಲ ಜಗತ್ತನ್ನು ಬಾಹ್ಯದಲ್ಲಿ ಸಂಘಟಿಸ ಬಲ್ಲವು, ಆದರೆ ದೃಢವಾದ, ಚಿರಂತನವಾದ ಏಕ ತಾನವಾಗ ಬೇಕಾದರೆ ಭಾವನೆಗಳ, ಆದರ್ಶಗಳ ಬಾಂಧವ್ಯವನ್ನು ದೃಢಪಡಿಸಬೇಕು, ಮಾನವ ಕೋಟಿಯ ಮನೆಯನ್ನು ಮತ್ತೆ ಕಟ್ಟುವ ಕೆಲಸದಲ್ಲಿ ವಿಜ್ಞಾನದಷ್ಟೇ ಧರ್ಮದ ಪಾತ್ರವೂ ಮುಖ್ಯವಾದುದು, ಮಾನವ ವ್ಯಕ್ತಿಯು, ದೇಹ, ಮನಸ್ಸು, ಚೇತನ, ಇವುಗಳ ಸಮಷ್ಟಿ, ಒಂದೊಂದಕ್ಕೂ ಅದರದರ ಆಹಾರ ಅಗತ್ಯ, ಆಹಾರ ಮತ್ತುವ್ಯಾಯಾಮದಿಂದ ದೇಹ ಸಮರ್ಪಕವಾಗಿರುತ್ತದೆ. ವಿಜ್ಞಾನ ಮತ್ತು ವಿಮರ್ಶೆಯಿಂದ ಮನಸ್ಸು ಪುಷ್ಟವಾಗುತ್ತದೆ. ಕಲೆ, ಸಾಹಿತ್ಯ, ದರ್ಶನ, ಧರ್ಮ ಇವುಗಳಿಂದ ಚೇತನ ಪ್ರಭುದ್ಧವಾಗುತ್ತದೆ, ಮಾನವ ಕೋಟಿಯ ಚೇತನ ಬೆಳೆಯ ಬೇಕಾದರೆ ಅದರ ಸುಂದರ ಪ್ರವೃತ್ತಿಗಳನ್ನು ಬಳಸುವುದರಿಂದಲೇಸಾಧ್ಯ. ಭಗವಂತನು ನಿರೂಪಣೆಗೆ ನಿಲುಕುವವನಲ್ಲ. ಅವನ ಅಭಿವ್ಯಕ್ತಿ ಅನಂತವಾದುದು, ಪೂರ್ವದಲ್ಲಿ ಧರ್ಮವು ಆಂತರಿಕ ಜೀವನದ ಬೆಳವಣಿಗೆಗೆ, ಆಧ್ಯಾತ್ಮ ಸ್ವಾತಂತ್ರ್ಯವನ್ನು ಪಡೆಯುವುದೇ ಧರ್ಮವಾಗಿತ್ತು. ವ್ಯಕ್ತಿ ಗಿರಿಶಿಖರಗಳ ಮೇಲೆ, ಗುಹಾಮಠಗಳಲ್ಲಿ ಏಕಾಂತದಲ್ಲಿ ತುಂಬ ಪ್ರಯತ್ನದಿಂದ ಇದನ್ನು ಗಳಿಸಿಕೊಳ್ಳುತ್ತಿದ್ದನು.

ಮಾನವ ಜಗತ್ತಿನಿಂದ ಭಗವಂತನು ದೂರವೇನಲ್ಲ, ವಾಸ್ತವವಾಗಿ ಮಾನವ ಕೋಟಿಯಲ್ಲಿ ಭಗವಂತ ಪ್ರವೇಶಿಸಿದ್ದಾನೆ. ಮಾನವ ಜನಾಂಗ ಮತ್ತು ಭಗವಂತ ಇವರ ಐಕ್ಯತೆ ಹೀಗೆ ಸಾಧ್ಯವಾಗಿದೆ. ಧರ್ಮದ ಪ್ರಯಾಣ ಪೂರ್ವದಿಂದ ಪಶ್ಚಿಮ-ಕ್ಕಾದರೆ ದೇವತಾವಾದದ ಪ್ರಯಾಣ ಪಶ್ಚಿಮದಿಂದ ಪೂರ್ವಕ್ಕಾಯಿತು.

ಪೂರ್ವ ದೇಶಗಳಲ್ಲಿ ಆಧ್ಯಾತ್ಮಿಕ ಜೀವನಕ್ಕೆ ಅತಿಯಾದ ಗೌರವವಿದ್ದು ಭೌತಿಕ ವಿವರಗಳ ಮೇಲೆ ಔದಾಸೀನ್ಯ ಮೂಡಿ ಬಂದಿದೆ.

ಪಾಶ್ಚಾತ್ಯ ಧರ್ಮದ ಹೆಚ್ಚಳವೇನೆಂದರೆ ವ್ಯಕ್ತಿಯು ಇತರರಿಗೆ ಮಾಡುವ ಸೇವೆಯಲ್ಲಿ ತನ್ನ ಮುಕ್ತಿಯನ್ನು ಗಳಿಸಿಕೊಳ್ಳುತ್ತಾನೆ, ದೈವದೊಂದಿಗೆ ನಿಕಟ ಸಂಪರ್ಕ ಪಡೆಯಲು ಏಕಾಂತ ವಾಸಕ್ಕೆ ಹೊರಟರೆ ಸಾಲದು, ಧರ್ಮವು ಜೀವನಾತೀತವಾದುದು ಮಾತ್ರವಲ್ಲ, ಜೀವನವನ್ನು ಪರಿವರ್ತನೆಗೊಳಿಸಬಲ್ಲದು, ದುಃಖಾರ್ತರಾದ ಜನರ ಸೇವೆ ಮಾಡುವುದೇ ನಿಜವಾದ ಪೂಜೆ, ಧರ್ಮವು ಪ್ರತಿಯೊಬ್ಬ

ಮನುಷ್ಯನ ಆತ್ಮವೂ ಅಪಾರವಾದ ಮೌಲ್ಯವುಳ್ಳದ್ದು ಎಂದು ಸಮರ್ಥಿಸುತ್ತದೆ, ಎಲ್ಲರ ಆತ್ಮಗಳು ಸಮ ಎನ್ನುವ ಆನಂದಾತಿರೇಕದ ಅರಿವು ಮನುಷ್ಯನ ನಡುವೆ ಇರುವ ಭೇದ ಭಾವನೆಯನ್ನು ಮುರಿಯುತ್ತದೆ, ನಿಜವಾದ ಧರ್ಮದಲ್ಲಿ ಇಡೀ ಮಾನವ ಜನಾಂಗವೇ ಒಂದು ಎಂಬ ಸಾಕ್ಷಾತ್ಕಾರದ ಕಲ್ಪನೆಯಿದೆ. ಆಧ್ಯಾತ್ಮಿಕ ಸಮಾಜವನ್ನು ಕಟ್ಟಲು ನಿಜವಾದ ಧರ್ಮ ನೆರವಾಗುತ್ತದೆ, ರಾಷ್ಟ್ರ, ಖಂಡ, ಭಾಷೆ, ಜಾತಿ ಎಂದು ಅದು ನಿಲ್ಲಬಾರದು, ಎಲ್ಲ ಮಾನವ ಕೋಟಿಯು ಇದರಲ್ಲಿ ಸೇರಬೇಕು. ಈ ಮಾನವ ಪ್ರೇಮದಿಂದ ನಾವು ಇತರರ ನಂಬಿಕೆಗಳನ್ನು ಗೌರವಿಸಬೇಕು, ದಯವೇ ಎಲ್ಲ ಧರ್ಮಗಳ ಮೂಲ, ಆದರೂ ಪ್ರಪಂಚದಲ್ಲಿ ಧರ್ಮಗಳ ಮೇಲಾಟದಿಂದ ರಕ್ತದ ಹೊಳೆಗಳು ಹರಿದಿವೆ. ಹರಿಯುತ್ತಿವೆ, ಅದು ಧರ್ಮದ ತಪ್ಪಲ್ಲ, ಅನುಯಾಯಿಗಳೆನಿಸಿ ಕೊಂಡವರ ತಪ್ಪು, ಎಷ್ಟೋ ದುರಂತಗಳು ಧರ್ಮದ ಹೆಸರಿನಲ್ಲಿ ಅನ್ಯ ಕಾರಣಗಳಿಗಾಗಿ ನಡೆದವು ಎಂಬುದನ್ನು ಮರೆಯಬಾರದು, ಸ್ವಾರ್ಥಸಾಧಕರು ಅಧಿಕಾರ ಲೋಲುಪರು ಪಟ್ಟಭದ್ರ ಹಿತಾಸಕ್ತರು ಧರ್ಮವನ್ನು ಒಂದು ಮುಸುಕನ್ನಾಗಿ ಮಾಡಿಕೊಂಡು ತಮ್ಮ ಉದ್ದೇಶಗಳನ್ನು ನೆರವೇರಿಸಿಕೊಳ್ಳಲು ತೊಡಗಿದ್ದಾರೆ.

ಆದರೆ ಧರ್ಮಸಂಸ್ಥಾಪಕರು ಧರ್ಮದ ನಿಜವಾದ ಆರಾಧಕರು, ಅಸಹಿಷ್ಣುತೆ-ಯನ್ನು ಅವರು ಬೋಧಿಸಿಲ್ಲ. ಸರ್ವ ಧರ್ಮ ಸಮಭಾವವನ್ನು ಸಮನ್ವಯವನ್ನು ಅವರು ಪುರಸ್ಕರಿಸಿದ್ದಾರೆ, ಹಿಂದೂ ಮುಸ್ಲಿಂ ಧರ್ಮಗಳ ಮಧುರ ಮಿಲನದ ಫಲವೇ ಸಂತ ಶ್ರೇಷ್ಠರಾದ ಕಬೀರ್ ಮತ್ತು ನಾನಕ್, ಮಹಾತ್ಮಗಾಂಧಿಯವರು "ಈಶ್ವರ ಅಲ್ಲಾತೇರೆನಾಮ್, ಸಬ್‌ಕೋಸನ್ಮತಿ ದೇಭಗವಾನ್" ಎಂದು ಪ್ರಾರ್ಥಿಸಿ ಹಿಂದೂ ಮುಸ್ಲಿಂ ಐಕ್ಯತೆಗಾಗಿ ತಮ್ಮ ಬಾಳನ್ನೇ ಮುಡುಪಾಗಿಟ್ಟರು. ●

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಪತ್ರಿಕೆಗಳು ಅವರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡು-ವುದರ ಮುಖೇನ "ಸಿದ್ಧಗಂಗಾ" ನಿಮಗೆ ಸುಗಮವಾಗಿ ತಲುಪಲು ನಮ್ಮೊಂದಿಗೆ ಸಹಕರಿಸಲು ಪ್ರಾರ್ಥನೆ.
ತಮ್ಮ ಸದಸ್ಯತ್ವದ ನಂಬರನ್ನು
ತಪ್ಪದೇ ತಿಳಿಸಿರಿ.

ಪ್ರಕಾಶಕರು.

# ಅಕ್ಕಮಹಾದೇವಿ ಮತ್ತು ಮೀರಾಬಾಯಿ

ಡಾ॥ ಟಿ. ಜಿ. ಪ್ರಭಾಶಂಕರ್, ಪ್ರೇಮಿ, ರೀಡರ್ ಹಿಂದಿವಿಭಾಗ, ಬೆಂಗಳೂರು
ವಿಶ್ವವಿದ್ಯಾಲಯ ಬೆಂಗಳೂರು-56.

ಮೇವಾಡದ ಕೃಷ್ಣ ಭಕ್ತೆ ಮೀರಾಬಾಯಿಗೆ ನಾಲ್ಕು ಶತಮಾನಗಳ ಮೊದಲೇ ಕರ್ನಾಟಕದಲ್ಲಿ ಅಕ್ಕಮಹಾದೇವಿ ಅವತರಿಸಿದಳು. ಅಕ್ಕಮಹಾದೇವಿ ಉಡುತಡಿಯ ಗ್ರಾಮದಲ್ಲಿ ಸುಮತಿ, ನಿರ್ಮಲಶೆಟ್ಟರ ಮಗಳಾಗಿಜನಿಸಿದ ಮಹಾಶಿವಶರಣೆ. ಮೀರಾಬಾಯಿ ಕೃಷ್ಣನನ್ನು ಆರಾಧಿಸುವಂತೆ ಇವಳೂ ಕೂಡ ಚೆನ್ನಮಲ್ಲಿಕಾರ್ಜುನನನ್ನೇ ಭಕ್ತಿಯಿಂದ ಆರಾಧಿಸತೊಡಗಿದಳು. ಬಾಲಿಕೆಯಾಗಿದ್ದಾಗ ಮೀರಾಬಾಯಿ ಗಿರಿಧರನ ಲಾಲನ ಮೂರ್ತಿಯೊಡನೆ ಆಟವಾಡಿದಂತೆ ಅಕ್ಕಮಹಾದೇವಿ ಶಿವನೊಡನೆ ಆಟವಾಡುತ್ತಾ ಐಹಿಕ ಪಾಶಗಳನ್ನೇ ಮರೆತಳು.

ಲಿಂಗದೊಡನಾಟದಲ್ಲಿ ಮಗ್ನಳಾದ ಮಹಾದೇವಿ ಮತ್ತು ಗಿರಿಧರ ಗೋಪಾಲನಲ್ಲಿ ಅನುರಕ್ತಳಾದ ಮೀರಾಬಾಯಿ ಇಬ್ಬರೂ ಯೌವನಾವಸ್ಥೆಗೆ ಕಾಲಿರಿಸಿದರು. ಇಬ್ಬರಿಗೂ ಲೌಕಿಕ ಜೀವನದಲ್ಲಿ, ಈ ಜಗದಗಂಡರಲ್ಲಿ ಆಸಕ್ತಿ ಇರಲಿಲ್ಲ. "ಹರನೇ ಗಂಡನಾಗಬೇಕೆಂದು ಬಹುಕಾಲ ತಪಸಿದ್ದೆ ನೋಡಾ" ಎಂದು ಅಕ್ಕಮಹಾದೇವಿ ಸಾವಿಲ್ಲದ, ಕೇಡಿಲ್ಲದ,ರೂಹಿಲ್ಲದ ಚೆಲುವಂಗೆ ಒಲಿದಳು. "ಈಸಾವ ಕೆಡುವಗಂಡರ ನೋಯ್ದು ಒಲೆಯೊಳಗಿಕ್ಕಾ" ಎಂದು ಅಕ್ಕ ಲೋಕದ ಗಂಡರ ಬಗ್ಗೆ ಅನಾಸಕ್ತಿ ತೋರಿಸಿ ವಿರಾಗವನ್ನು ತಾಳಿದಳು. ಆದರೆ ಮೀರಾಬಾಯಿಯ ಜೀವನದಲ್ಲಿ ಇಷ್ಟು ಅನಾಸಕ್ತಿಯನ್ನು ಕಾಣುವುದಿಲ್ಲ. ಕಾರಣ ಆಕೆ ಬೆಳೆದುದೇ ರಾಜಮನೆತನದಲ್ಲಿ. ರಾಜಕುಮಾರಿಯಾಗಿ, ಆಕೆ ಪ್ರಸಿದ್ಧ ರಾಠೌರ ಮನೆತನದವಳು. ರಾವ್ ದೂದಾಜೀಯ ಮೊಮ್ಮಗಳು. ಕ್ರಿ.ಶ. 1503ರ ಸುಮಾರಿನಲ್ಲಿ ಜನಿಸಿದ ಮೀರಾಬಾಯಿ ಚಿಕ್ಕಂದಿನಲ್ಲೆ ತಂದೆ ತಾಯಿಯರನ್ನು ಕಳೆದುಕೊಂಡು ತಾತನ ಪ್ರೀತಿ ವಾತ್ಸಲ್ಯಗಳಿಂದ ಬೆಳೆದಳು. ಬಾಲ್ಯದಿಂದಲೇ ತಾತನ ವೈಷ್ಣವಭಕ್ತಿ, ಧರ್ಮನಿಷ್ಠೆ ಮತ್ತು ಸತ್ಸಂಗಗಳು ಪ್ರಭಾವ ಬೀರಿದವು.

ಯೌವನದ ಹೊಸ್ತಿಲನ್ನು ದಾಟಿದ ಅಪೂರ್ವ ಸುಂದರಿ ಮೀರಾಳನ್ನು ಕೈ ಡಿಯುವ ಭಾಗ್ಯ ಮಹಾರಾಣಾ ಸಾಂಗನ ಜೇಷ್ಠಪುತ್ರ ಭೋಜರಾಜನದಾಯಿತು. .ಶ. 1516 ರಲ್ಲಿ ಮದುವೆಯಾಗಿ ಮೇವಾಡಕ್ಕೆ ಬಂದಳು. ಮೀರಾಳಿಗಾಗಿಯೇ ಂಡನು ಅರಮನೆಯಲ್ಲಿ ಕೃಷ್ಣ ಮಂದಿರ ಕಟ್ಟಿಸಿದನು.

ಇತ್ತ ಅಕ್ಕಮಹಾದೇವಿ ಮೊದಲಿನಿಂದಲೂ ವೈರಾಗ್ಯಭಾವದ ಭೋಗವನ್ನು ಯಸದ ಶರಣೆ ಉಡುತಡಿಯ ಕಾಮುಕನಾದ ಕೌಶಿಕ ಮಹಾರಾಜನ ಒತ್ತಾಯಕ್ಕೆ ಣಿಯಬೇಕಾಯಿತು. ಆದ್ದರಿಂದ ಮೀರಾಬಾಯಿಯಂತೆ ಪತಿ ಸುಖವನ್ನು

ಪಡೆಯುವ ಬದಲು ಪತಿ ತನ್ನ ಶಿವಶರಣರ ಸೇವೆಗೆ ಅಡ್ಡಿ ಬರಲು ಪತಿಯನ್ನೆ ತ್ಯಜಿಸಿದಳು. ಉಟ್ಟ ತೊಡಿಗೆಯನ್ನೆ ಕಳಚಿ, ಭವನದ ಬಂಧನವನ್ನೇ ತೊಡೆದ ವಿರಾಗಿಣಿಯಾಗಿ ಚೆನ್ನಮಲ್ಲಿಕಾರ್ಜುನ ನನ್ನು ಅರಸುತ್ತಾ ಹೊರಟಳು. ಅವಳ ಚೆನ್ನಮಲ್ಲಿಕಾರ್ಜುನ ನನ್ನು ಕಾಣುವುದೊಂದೇ ಹಂಬಲ.

ಮೀರಾಬಾಯಿ ಗಂಡನ ಪ್ರೀತಿ, ಪ್ರೇಮಗಳನ್ನು ಪಡೆದು ಸುಖವಾಗಿದ್ದರೂ ಆಕೆಯ ವೈಷ್ಣವ ಭಕ್ತಿ ಮಾವನ ಮನೆಯವರಿಗೆ ಹಿಡಿಸಲಿಲ್ಲ. ಮೇವಾಡದ ರಾ ಮನೆತನದವರು ಶೈವರು ಮತ್ತು ಶಕ್ತಿಯ ಉಪಾಸಕರು. ಆದ್ದರಿಂದ ಮೀರಾಳ ಅ ಬಹಳವಾಗಿ ಕಷ್ಟಕೊಟ್ಟರು. ಆದರೂ ಗಂಡನ ಪ್ರೀತಿ-ಔದಾರ್ಯ ದಿಂದಾಗಿ ಮೀರ ಸಹಿಸಿಕೊಂಡಿದ್ದಳು. ಆದರೆ ದೈವ ಸಂಕಲ್ಪ ಬೇರೆಯೇ ಆಗಿತ್ತು. ಗಂಡನೊಂದಿ ಹೆಚ್ಚುದಿನ ಬಾಳುವ ಸೌಭಾಗ್ಯವನ್ನು ಮೀರಾ ಪಡೆದು ಕೊಂಡು ಬಂದಿರಲಿ ಗಂಡ ಕುವರ ಭೋಜರಾಜ ಬಾಬರ್ ಮತ್ತು ಸಂಗ್ರಾಮ ಸಿಂಹರ ನಡುವೆ ನಡೆ ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿ ಮಡಿದ. ಹೀಗೆ ಹಠಾತ್ ಬಂದೊದಗಿ ವೈಧವ್ಯದಿಂದಾಗಿ ಒಂದುಕಡೆ ಪತಿವಿಯೋಗ ಮತ್ತೊಂದು ಕಡೆ ಅತ್ತೆ ಮತ್ತು ಮೈದು ನರಿಂದ ಕಿರುಕುಳ ತಾಳಲಾರದೆ ಇಡೀ ಲೌಕಿಕ ಬಂಧನವನ್ನು ಕಿತ್ತೊಗೆದು ತೀರ್ಥ ಯಾತ್ರೆ ಮಾಡುತ್ತಾ ವೃಂದಾವನದ ಕಡೆಗೆ ಹೊರಟಳು. ಭಕ್ತಿ ಪರವಶಳಾ ನರ್ತಿಸುತ್ತಾ ಮೀರಾ ಹೀಗೆ ಹಾಡಿದ್ದಾಳೆ :

ಕಟ್ಟಿ ಕಾಲಿಗೆ ಗೆಜ್ಜೆ ಹಾಡುವೆ ಕುಣಿಯುತ
ಶ್ಯಾಮಸುಂದರನಲ್ಲೆ ಮುಳುಗಿ ಅನುರಾಗದಿ
ಕರತಾಳ ಮಾಡುತ, ಬಾರಿಸುವೆ ಮೃದಂಗ ಕುಣಿಯುತ

ಅಕ್ಕಮಹಾದೇವಿ ಮತ್ತು ಮೀರಾಬಾಯಿ ಇಬ್ಬರದು ಒಂದೇ ಹಂಬಲ ತಮ ಇಷ್ಟ ದೇವರನ್ನು ಕಾಣುವುದು. ಆದರೆ ಅವರ ಮನಸ್ಸಿನ ಬೇನೆಯನ್ನು ಅಂದಿ ಸಮಾಜ ಅರ್ಥ ಮಾಡಿಕೊಳ್ಳಲಿಲ್ಲ. 'ಘಾಯ:ಲ್ ಕೀಗತಿ ಘಾಯಲ್ ಜಾನೆ ಎಂದು ಮೀರಾಬಾಯಿ ಹೇಳಿದರೆ ಮಹಾದೇವಿ 'ಬಂಜೆ ಬೇನೆಯ ನರಿಯಳು ಮಲತಾ ಮುದ್ದು ಬಲ್ಲಳೇ! ನೊಂದ ನೋವ ನೋಯದವರೆತ್ತ ಬಲ್ಲರು' ಎಂದಿದ್ದಾಳೆ.

ಮೈದುನ ರಾಣಾ ಮೀರಾಳಿಗೆ ವಿಷ ಕುಡಿಸ ಲೆತ್ನಿಸಿದರೆ ಅಕ್ಕಮಹಾದೇ ವಿಷವನ್ನಿಕ್ಕುವ ಸಮಾಜವನ್ನೇ ಆಹ್ವಾನಿಸಿದ್ದಾಳೆ–

ಹಸಿವಾದೊಡೆ ಭಿಕ್ಷಾನ್ನಗಳುಂಟು
ತೃಷೆಯಾದೊಡೆ ಹಳ್ಳ ಬಾವಿಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನ ಆತ್ಮ ಸಂಗತಕ್ಕುಂಟು.

ಹೀಗೆ ಅಕ್ಕ ಯಾರಿಗೂ ಅಂಜದೆ ಅಳುಕದೆ ಭಗವಂತನೇ ಸಂಗಾತಕ್ಕಿರುವಾಗ ಯಾರೇನುಮಾಡಿ ಯಾರು ಎನ್ನುತ್ತಾಳೆ.

ಮೀರಾಬಾಯಿ ವೃಂದಾವನಕ್ಕೆ ಬರುತ್ತಾಳೆ. ಶ್ರೀಕೃಷ್ಣನ ಲೀಲಾಭೂಮಿ ವಿಷ್ಣುವಿನ ವೈಕುಂಠ ಮೀರಾಬಾಯಿ ಗೋಪಿಕೆಯಂತೆ ಭಜಿಸುತ್ತಾ ನರ್ತಿಸುತ್ತಾ ವೃಂದಾವನಕ್ಕೆ ಕಾಲಿರಿಸುತ್ತಾಳೆ. ಸ್ತ್ರೀ ಯರ್‍ಯಾರಿಗೂ ದರ್ಶನ ಕೊಡದ ಮಹಾತ್ಮ ಜೀವ ಗೋಸ್ವಾಮಿಗಳನ್ನು ಸಂಧಿಸಿದ್ದು ಪವಾಡ ಸದೃಶ ಘಟನೆ. ಮೀರಾಳಿಗೆ ದರ್ಶನ ಕೊಡಲು ನಿರಾಕರಿಸಿದಾಗ ಮೀರಾ ಹೀಗೆ ಸಂದೇಶ ಕಳುಹಿಸುತ್ತಾಳೆ. "ನಾನು ಇದುವರೆವಿಗೂ ವೃಂದಾವನದಲ್ಲಿರುವ ಭಗವಾನ್ ಕೃಷ್ಣನೇ ಏಕಮಾತ್ರ ಪುರುಷನೆಂದು ತಿಳಿದಿದ್ದೆ ಹಾಗೂ ಇತರರನ್ನು ಕೇವಲ ಗೋಪಿ ಅಥವಾ ಸ್ತ್ರೀ ರೂಪವೆಂದು ತಿಳಿದಿದ್ದೆ. ಆದರೆ ತನ್ನನ್ನು ಪುರುಷನೆಂದು ತಿಳಿಯುವ ಮತ್ತೊಬ್ಬನು ಇಲ್ಲಿದ್ದಾನೆಂದು ಈಗ ತಿಳಿಯಿತು" ಚೈತನ್ಯ ಸಂಪ್ರದಾಯದ ಪ್ರವರ್ತಕ ಜೀವ ಗೋಸ್ವಾಮಿಗಳು ಈ ಸಂದೇಶ ಕೇಳುತ್ತಲೇ ತಮ್ಮ ಅಭಿಮಾನವನ್ನು ತೊರೆದು ಪ್ರೇಮಾವೇಶದಿಂದ ಸ್ವತಃ ಬರಿಗಾಲಿನಲ್ಲಿಯೇ ಸ್ವಾಗತಿಸಲು ಬರುತ್ತಾರೆ.

ಮೀರಾಬಾಯಿ ವೃಂದಾವನದ ಕೋಗಿಲೆ ಕೃಷ್ಣನನ್ನು ನೆನೆನೆನೆದು ಹಾಡಿದ್ದಾಳೆ

ನನ್ನ ಮನಹರಿಸಿದ ರಣಛೋಡಜೀ ಕೃಷ್ಣ
ಶಿರದಲಿ ನವಿಲು ಕಿರೀಟ, ಶೋಭಿಸುತಿವೆ ಕುಂಡಲ
ಸಾಗರ ತೊಳೆದಿದೆ ಅವನ ಶ್ರೀ ಪಾದ, ಹರಿದಿದೆ ಗೋಮತಿಧಾರೆ
ತಟದಲಿ ರಾರಾಜಿಸುತಿದೆ ಧ್ವಜ ಪತಾಕೆ
ಭಕ್ತಜನರ ಓಲೈಸುತಿಹ ನನ್ನ ನಂದ ಕಿಶೋರಾ
ಮೀರಾಳ ಪ್ರಭು ಕರಪಿಡಿದಿಹ ಗಿರಿಧರ ನಾಗರ ರಣ ಛೋರಾ

ಹೀಗೆ ಮೀರಾಬಾಯಿ ವೃಂದಾವನದಲ್ಲಿದ್ದು ವಲ್ಲಭ ಸಂಪ್ರದಾಯದ ಸಂತರಿಂದ ಕೃಷ್ಣಭಕ್ತಿಯನ್ನು, ಜೀವಗೋಸ್ವಾಮಿಗಳಿಂದ ಮಧುರಾ ಭಕ್ತಿಯನ್ನು, ನಿರ್ಗುಣ ಸಂತರಿಂದ ಜಗತ್ತಿನ ನಶ್ವರತೆ ಮತ್ತು ನಿರಾಕಾರ, ಈಶ್ವರ ಸ್ವರೂಪವನ್ನು ಮತ್ತು ಸೂರದಾಸಿದಿ ಕವಿಗಳಿಂದ ವಿನಯುವನ್ನೂ ಕಲಿತು ದ್ವಾರಕೆಯಕಡೆ ಧಾವಿಸುತ್ತಾಳೆ.

ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತಾ ಹೊರಟ ಅಕ್ಕಮಹಾದೇವಿ ಕಲ್ಯಾಣಕ್ಕೆ ಬರುತ್ತಾಳೆ. ಕಲ್ಯಾಣ ಭಕ್ತಿ ಭಂಡಾರಿ ಬಸವೇಶ್ವರರ ಕರ್ಮ ಭೂಮಿ. ಶರಣರ ಪಾದದೂಳಿನಿಂದ ಪುನೀತವಾದ ಬಿಜ್ಜಳನ ರಾಜಧಾನಿ. ವೃಂದಾವನದಲ್ಲಿ ಜೀವಗೋಸ್ವಾಮಿಗಳ ದರ್ಶನ ಮೀರಾ ಪಡೆದಂತೆ 'ಅನುಭವ ಮಂಟಪ' ದಲ್ಲಿ ಅಕ್ಕ ಅಲ್ಲಮಪ್ರಭುಗಳ ದರ್ಶನ ಪಡೆಯುತ್ತಾಳೆ. ಅಲ್ಲಮ ಅಕ್ಕಮಹಾದೇವಿಯನ್ನು

ಒಪ್ಪುವುದಿಲ್ಲ. "ಸತಿಯೆಂದರೆ ನಮ್ಮ ಶರಣರು ಮುನಿವರು" ಆದ್ದರಿಂದ ನಿನ್ನ ಗಂಡನ ಕುರುಹ ತಿಳಿಸಿ ಒಳಗೆ ಬಾ ಎನ್ನುತ್ತಾರೆ. ಹರನೇ ತನ್ನ ಗಂಡನೆಂದು ಸ್ಥಿರಪಡಿಸಿ ಅಲ್ಲಮಪ್ರಭುಗಳು ಒಡ್ಡಿದ ವೈರಾಗ್ಯದ ಅಗ್ನಿಪರೀಕ್ಷೆಯಲ್ಲಿ ಅಕ್ಕ ತೇರ್ಗಡೆ ಹೊಂದು ತ್ತಾಳೆ. ಶರಣರೆಲ್ಲಾ, 'ಲಿಂಗಪತಿ ಶರಣಸತಿ' ಸಿದ್ಧಾಂತವನ್ನು ಅಕ್ಕ ಸ್ಥಿರಪಡಿಸಿ ದಾಗ, ಅವಳ ಆಧ್ಯಾತ್ಮಿಕ ಜ್ಞಾನದ ಮುಂದೆ ತಲೆಬಾಗುತ್ತಾರೆ. ಮಹಾದೇವಿಯ ಹಿರಿತನವನ್ನು ಕೊಂಡಾಡುತ್ತಾ ಚೆನ್ನಬಸವಣ್ಣ ಹೇಳುತ್ತಾರೆ. "ಅನುವರಿತು ಘನವ ಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲಸಂಗಯ್ಯನಲ್ಲಿ ಬೆರಸಿ, ಬೇರಿಲ್ಲದ ಹಿರಿತನ ನಮ್ಮ ಅಕ್ಕ ಮಹಾದೇವಿಯಕ್ಕಂಗಾಯಿತ್ತು." ಸಿದ್ಧರಾಮೇಶ್ವರರು ಅಕ್ಕನನ್ನು 'ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಗೌರವಿಸುತ್ತಾರೆ. ನಿಗರ್ವಿಯಾದ ಅಕ್ಕಮಹಾದೇವಿ ವಿನಯದಿಂದ ಹೇಳುತ್ತಾಳೆ. "ಬಸವಣ್ಣನ ಭಕ್ತಿ, ಚನ್ನಬಬಸವಣ್ಣ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ಸಿದ್ಧರಾಮನ ಸಮಾಧಿಸ್ಥಲ, ಇಂತಿವರ ಕರುಣಪ್ರಸಾದ ಎನಗಾಯ್ತು ಚೆನ್ನಮಲ್ಲಿಕಾರ್ಜುನಯ್ಯ."

ಅಕ್ಕಮಹಾದೇವಿ ಕಲ್ಯಾಣದಿಂದ ಶ್ರೀ ಶೈಲಕ್ಕೆ ಚನ್ನಮಲ್ಲಿಕಾರ್ಜುನನನ್ನು ಅರಸುತ್ತಾ ನಡೆದಂತೆ, ಇತ್ತ ಮೀರಾಬಾಯಿಯು ದ್ವಾರಕೆಗೆ ಬರುತ್ತಾಳೆ. ಅಲ್ಲಿ ರಣಛೋಡ್ ಜೀಯ ಮಂದಿರದಲ್ಲಿ ಭಜನೆ, ಸಂಕೀರ್ತನೆಗಳಲ್ಲೇ ಕಾಲ ಕಳೆಯುತ್ತಾಳೆ. ಅವಳನ್ನು ಹಿಂದಕ್ಕೆ ಕರೆಸಿಕೊಳ್ಳಲಿ ರಾಣಾ ಉದಯಸಿಂಹ ಮತ್ತು ಅಣ್ಣ ಜಯಮಲ್ಲ ಬ್ರಾಹ್ಮಣರನ್ನು ಕಳುಹಿಸಿಕೊಡುತ್ತಾರೆ. ಆದರೆ ಮೀರಾಬಾಯಿ ಹಿಂತಿರುಗಲು ಒಪ್ಪುವುದಿಲ್ಲ. ಬ್ರಾಹ್ಮಣರು ಹಿಂತಿರುಗುವವರೆಗೆ ತಾವು ಹೋಗುವುದಿಲ್ಲವೆಂದು ಸತ್ಯಾಗ್ರಹ ಹೂಡುತ್ತಾರೆ. ಮೀರಾಬಾಯಿ ರಣಛೋಡಜಿಯ ದರ್ಶನ ಪಡೆದುಬರಲು ಮಂದಿರವನ್ನು ಪ್ರವೇಶಿಸಿದವಳು ಹಿಂತಿರುಗುವುದೇ ಇಲ್ಲ. ರಣ ಛೋಡಜಿಗೆ ತನ್ನನ್ನು ಅರ್ಪಿಸಿಕೊಂಡು ಬಿಡುತ್ತಾಳೆ. ಮೀರಾಬಾಯಿ ಸ್ವತಃ ರಣ ಛೋಡಜಿಯ ಮಹಾಮಿಲನದವರ್ಣನೆ ಹೀಗೆ ಮಾಡಿದ್ದಾಳೆ

ನನ್ನ ಮನ ಹರಸಿದನೊ ರಣಛೋಡ,
ಶೋಭಿಸಿದೆ ಶಿರದಲಿ ನವಿಲ ಕಿರೀಟ, ಕರ್ಣಗಳಲಿ ಕುಂಡಲ ಅತಿಸುಂದರ ನೋಡ
ಪ್ರಭು, ಗಿರಿಧರ ನಾಗರ ಕೈ ಪಿಡಿಯೋ, ನಿನ್ನವಳೇ ಮೀರಾ

ಇತ್ತ ಅಕ್ಕಮಹಾದೇವಿ ಕಲ್ಯಾಣ ದಿಂದ ಶ್ರೀ ಶೈಲಕ್ಕೆ ಬಂದಿದ್ದಾಳೆ. ತನ್ನ ನಲ್ಲ ಚೆನ್ನಮಲ್ಲಿಕಾರ್ಜುನನನ್ನು ಕದಳಿವನದಲ್ಲಿ ಅರಸಿದ್ದಾಳೆ. ಚೆನ್ನಮಲ್ಲಿಕಾರ್ಜುನನನ್ನು ಕಂಡಿರಾ ಎಂದು, ಕಂಡರೆ ಕರೆದು ತೋರಿರೆ ಎಂದು ಪ್ರಕೃತಿಯ ಕಣಕಣವನ್ನು ಬೇಡುತ್ತಾಳೆ.

ಅಳಿ ಸಂಕುಲವೇ, ಮಾಮರವೇ, ಬೆಳುದಿಂಗಳೇ ಕೋಗಿಲೆಯೇ
ನಿಮ್ಮ ನಿಮ್ಮನೆಲ್ಲರನು ಒಂದ ಬೇಡುವೆನು
ಚೆನ್ನ ಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ

ಶ್ರೀಶೈಲದ ಉತ್ತುಂಗ ಶಿಖರವನ್ನೇರಿ, ಅಕ್ಕ ತನ್ನ ಭಾವ ಸಮಾಧಿಯಲ್ಲಿ ಬಯಲಾಗುವ ದೃಶ್ಯ ಮನೋಹರವಾದುದು. ಅಕ್ಕ ಸೃಷ್ಟಿಯ ಕಣಕಣದಲ್ಲಿ ತನ್ನನಲ್ಲನ ದರ್ಶನ ಮಾಡುತ್ತಾಳೆ.-

ವನವೆಲ್ಲನೀವೆ, ವನದೊಳಗಣ ದೇವತರುವೆಲ್ಲ ನೀವೆ,
ತರುವಿನೊಳಗಾಡವ ಖಗ ಮೃಗವೆಲ್ಲ ನೀವೆ,
ಚನ್ನ ಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರಾ
ನಲ್ಲನ ನಿಲವನ್ನು ಹೀಗೆ ವರ್ಣಿಸಿದ್ದಾಳೆ.
ಕಂಡೆನ್ನ ಕಂಗಳ ಬರಹಿಂಗಿತಿಂದು ಗಂಡು ಗಂಡರೆಲ್ಲ
ಹೆಂಡ ಹೆಂಡಿರಾಗಿ ಆಳುವ ಗರುವನ ಕಂಡೆನಾನು
ಜಗದಾದಿ ಶಕ್ತಿಯೊಳು ಬೆರಸಿಯೊಡನಾಡುವ
ಪರಮಗುರು ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು.

ಹೀಗೆ ಅಕ್ಕಮಹಾ ದೇವಿಯಆಧ್ಯಾತ್ಮಿಕ ಜೀವನ ಮೀರಾಬಾಯಿಗಿಂತಲೂ ಹೆಚ್ಚು ಕ್ರಾಂತಿ ಪೂರ್ಣವಾದುದು. ಮೀರಾಬಾಯಿ ನಿರ್ಗುಣವನ್ನು ವಿರೋಧಿಸದಿದ್ದರೂ ಮೂಲತಃ ಸಗುಣ ವೈಷ್ಣವ ಭಕ್ತೆ. ಆದರೆ ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜನನನ್ನು ನಲ್ಲನೆಂದು ಆರಾಧಿಸಿದರೂ, ಅವನ ಕಣಕಣದಲ್ಲೂ ನೆಲೆಸಿರುವವ. "ತಿಲದ ಮರೆಯ ಬ್ರಹ್ಮವಾಗಿಪ್ಪ" ಅವನ ನಿಲುವು ಅವರ್ಣನೀಯವಾದದು. ಅಕ್ಕ ಹೇಳುವಂತೆ ಆತ 'ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವ.

ಅಕ್ಕಮಹಾದೇವಿ ಮತ್ತು ಮೀರಾಬಾಯಿ ಇಬ್ಬರೂ ತಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಶಾಶ್ವತ ಸ್ಥಾನಗಳಿಸಿ ಕೊಂಡರು. ಅವರು ಯಾರನ್ನೂ ಮೆಚ್ಚಿಸಲು ಕಾವ್ಯ ಬರೆದವರಲ್ಲ. ಇಬ್ಬರ ಗುರಿಯು ಇಷ್ಟ ದೇವನಲ್ಲಿ ಏಕಾತ್ಮರಾಗುವುದು. ಅಕ್ಕ ಲಿಂಗಾಗಸಾಮರಸ್ಯವನ್ನು ಪ್ರತಿಪಾದಿಸಿದರೆ ಮೀರಾಬಾಯಿ ಮಾಧುರ್ಯ ಭಾವದಿಂದ ಹಾಡಿದ್ದಾಳೆ. ಸಾಮಾನ್ಯವಾಗಿ ಭಕ್ತರು ಸ್ತ್ರೀಯನ್ನು ಮಾಯೆಯೆಂದು ಜರಿಯುವುದು ಉಂಟು. ಆದರೆ ಅಕ್ಕ "ಬಿಟ್ಟನೆಂದರೆ ಬಿಡದೀಮಾಯೆ" ಎಂದು ಮಾಯೆಯಾರನ್ನೂ ಬಿಟ್ಟಿಲ್ಲ. ಅದರ ರೂಪ ಅನೇಕ ಅದು ಗಂಡಿಗೆ ಹೆಣ್ಣಾಗಿ ಕಾಡಿದರೆ ಹೆಣ್ಣಿಗೆ ಗಂಡಾಗಿ ಕಾಡುತ್ತದೆ.

ಅಕ್ಕ ಮತ್ತು ಮೀರಾಬಾಯಿ ಇಬ್ಬರೂ ಭಕ್ತಿಯ ಮಹತ್ವವನ್ನು ಎತ್ತಿಹಿಡಿದಿದ್ದಾರೆ. ಅಕ್ಕಮಹಾದೇವಿ ವಚನಗಳ ಮೂಲಕ 12ನೇ ಶತಮಾನದಲ್ಲಿ ನಡುಗನ್ನಡದಲ್ಲಿ ಸಾಹಿತ್ಯ ರಚನೆ ಮಾಡಿದರೆ, ಮೀರಾಬಾಯಿ 16ನೇ ಶತಮಾನದಲ್ಲಿ ರಾಜಾಸ್ಥಾನಿ ಮಿಶ್ರಿತ ಹಿಂದಿ ಭಾಷೆಯಲ್ಲಿ ಪದಗಳ (ಭಜನೆ) ಮೂಲಕ ಹಾಡಿದ್ದಾಳೆ. ಇಬ್ಬರ ರಚನೆಗಳು ಹಾಡಲು ಮಧುರ, ಆದ್ದರಿಂದಲೇ ಅವು ಜನಮನದಲ್ಲಿ ಅಚ್ಚಳಿಯದೆ ಉಳಿದಿವೆ.

# ಕ್ರಿಯಾತ್ಮಕ ಶಿಕ್ಷಣ

ಶ್ರೀಮಾನ್ ಆರ್. ಆರ್. ದಿವಾಕರ್ ಸಂಸ್ಥಾಪಕರು, ಲೋಕಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ.

ಮಾನವ ಜೀವನ, ಆದೇಕೆ, ಜೀವನವೆಂಬುದೆಲ್ಲ ಒಂದು ಕ್ರಿಯೆಯೇ ಇರುವುದ "ಯಾವನೂ ಒಂದು ಕ್ಷಣ ಮಾತ್ರ ಸಹಕರ್ಮವನ್ನು ಮಾಡದೆ ಜೀವಿಸಲಾರನು (ನಹಿಕಶ್ಚಿತ್ ಕ್ಷಣಮಪಿ ಜಾತುತಿಷ್ಠತ್ಯ ಕರ್ಮಕೃತ್) ಎಂದು ಭಗವದ್ಗೀತೆ ಸಾರಿರುವು ಇದು ಅಕ್ಷರಶಃ ಸತ್ಯವು; ಪ್ರತಿಕ್ಷಣಕ್ಕೂ ನಮ್ಮ ಅನುಭವಕ್ಕೆ ಬರುವುದು. ಉಸಿ ರಾಡಿಸುವುದು, ಸುಮ್ಮನಿರುವುದು, ವಿಚಾರ ಮಾಡುವುದು, ಇಷ್ಟೇ ಏಕೆ-ಸಾಯುವುದು ಸಹ ಒಂದು ಕ್ರಿಯೆ ಇರುವುದು.

ಅಂದ ಬಳಿಕ ಶಿಕ್ಷಣವು ಕ್ರಿಯಾತ್ಮಕವಿರಬೇಕು ಎಂದು ಹೇಳುವ ಅವಶ್ಯಕತೆಯೆ ಇಲ್ಲ. ಆದರೆ ಅದೆಂಥ ಕ್ರಿಯೆ ಇರಬೇಕು; ಅದನ್ನು ಶಿಕ್ಷಣದಲ್ಲಿ ಯಾವ ಬಗೆಯಾ ಸೇರಿಸಬೇಕು ಇದೇ ಪ್ರಶ್ನೆ ಇರಬಲ್ಲದು.

ವಿಚಾರವೂ ಒಂದು ಕ್ರಿಯೆ, ಆದರೆ ಅದು ಮಿದಳಿನ ಕ್ರಿಯೆ, ಬುದ್ಧಿಯ ವ್ಯಾಪಾ ಮನುಷ್ಯನೆಂದರೆ ಬರೀ ಮಿದುಳಲ್ಲ, ಬುದ್ಧಿಯಲ್ಲ, ಅವನಿಗೆ ಮೈ ಕೈಗಳಿರುವುವು. ಆದ ರಿಂದ ಶಿಕ್ಷಣವು ಕ್ರಿಯಾತ್ಮಕವಿರಬೇಕು ಎಂದು ಹೇಳುವುದರ ಅರ್ಥವೇನೆಂದರೆ ಶಿಕ್ಷಣದ ಮೈಕೈಗಳಕ್ರಿಯೆಯೂ ಅವಶ್ಯ. ಆಕ್ರಿಯೆ ಜೀವನಕ್ಕೆ ಉಪಯುಕ್ತವಾದ ಪದಾರ್ಥಗ ನಿರ್ಮಾಣ ಮಾಡುವಂತಹದಿರಬೇಕು. ಇಲ್ಲದಿದ್ದರೆ ಆಕ್ರಿಯೆ ವ್ಯರ್ಥವೆನಿಸುವುದು.

ಇನ್ನು ಮೈ, ಕೈಗಳ ಕ್ರಿಯೆ (ಜೀವನಕ್ಕೆ ಉಪಯುಕ್ತವಾದ ಕ್ರಿಯೆ) ಮತ್ತು ಬುದ್ಧಿಯ ಕ್ರಿಯೆ ಎನಿಸುವ ವಿಚಾರ-ಉಚ್ಚಾರಾದಿಗಳು. ಇವುಗಳ ಪರಸ್ಪರ ಸಂಬಂ ವೇನಿರಬೇಕು? ಅವು ಒಂದಕ್ಕೊಂದು ಹೊಂದಿಕೊಂಡಿರಬೇಕು; ಪರಸ್ಪರ ಪೋಷಕವ ಬೇಕು. ಮೈ ಕೈ ಮತ್ತು ಮಿದುಳು ಇವೆರಡೂ ಒಂದಕ್ಕೊಂದು ಹೊಂದಿಕೊಂಡ ಜೀವನಕ್ಕೆ ಉಪಯುಕ್ತವಾದ ಕ್ರಿಯೆಯಲ್ಲಿ ತೊಡಗಿದರೆ ಅದೇ "ಕ್ರಿಯಾತ್ಮ ಶಿಕ್ಷಣ" ಎನಿಸುವುದು.

ಈ ಬಗೆಯ ಶಿಕ್ಷಣಕ್ಕೆ ಗಾಂಧೀಜಿಯವರು "ಜೀವನ ಶಿಕ್ಷಣ" "ಮೂಲ ಶಿಕ್ಷಣ "ಬುನಿಯಾದಿ ತಾಲೀಮು" "ಬೇಸಿಕ್ ಎಜುಕೇಷನ್" ಎಂಬ ಹೆಸರನ್ನಿಟ್ಟರು ಶಿಕ್ಷಣವು ಕೇವಲ ಮೈ ಕೈ ಬಳಸುವಂತಹದುಇರಕೂಡದು. ಯಾಕೆಂದರೆ ಮನು ಷ್ಯನು ಕೇವಲ ಮೈ ಕೈ ಅಲ್ಲ, ಕೇವಲ ಬುದ್ಧಿಯೂ ಅಲ್ಲ; ಅವೆರಡರ ಬಿಡಲಾರ ಜೊತೆ ಅವನು ಅವೆರಡರ ಹೊಂದಿಕೆ, ಪರಸ್ಪರ ಪೋಷಣೆ ಇವುಗಳಿಂದಲೇ ಪೂರ್ಣ ಮಾನವನು ಸಿದ್ಧನಾಗಬಲ್ಲನು. ಇಲ್ಲದಿದ್ದರೆ ಅವನು ಅಪೂರ್ಣನಾಗಿಯೇ ಉಳಿಯು ವನು. ಇದೇ ಗಾಂಧೀ ಪುನೀತವಾದ ಕ್ರಿಯಾತ್ಮಕ ಶಿಕ್ಷಣದರಹಸ್ಯವು. ●

# ವಿದ್ಯಾರ್ಥಿ ಜೀವನದ ಬೆಳಕು ಸರಣಿ-4.

ಬಿ. ಎಸ್. ಕೃಷ್ಣಮೂರ್ತಿ, ನಂ 5, ಸೀತಾ ವಿಲಾಸ ರಸ್ತೆ, ಮೈಸೂರು-570024.

**ವಿದ್ಯಾರ್ಥಿ ಜೀವನದ ತಿರುಳು:** ವಿದ್ಯಾರ್ಥಿಯು ಕಲಿಕೆಯಲ್ಲಿ ಶ್ರದ್ಧೆ, ಆಸಕ್ತಿ ಇಟ್ಟಿರಬೇಕು. ತನ್ನ ಗಮನ ಅಧ್ಯಯನದ ಕಡೆಗೆ ಮಾತ್ರ ಕೇಂದ್ರಿಕೃತವಾಗಿರಬೇಕು. ವಿದ್ಯೆ ತೇಜೋಮಯವಾಗಲೂ ಮನಸ್ಸು ಹುರುಪಿನಿಂದ ಕೂಡಿರಬೇಕು. ಪ್ರಸಿದ್ಧರಾದ ಲೋಕನಾಯಕರು, ಲೇಖಕರು, ಮಹಾತ್ಮರು, ವಿದ್ಯಾ ಪರಿಣಿತರುಗಳ ಜೀವನ ಧ್ಯೇಯಗಳು, ಅವರ ಇತಿಹಾಸಗಳನ್ನೋದಿ ಅವರನಡೆ, ನುಡಿಗಳನ್ನು ಮನನ ಮಾಡಿ ತಮ್ಮಲ್ಲಿನ ಕೀಳಾಭಿಪ್ರಾಯಗಳನ್ನು ತಿದ್ದಿಕೊಳ್ಳಬೇಕು. ತಾಯ್ತಂದೆಗಳು, ಗುರು ಹಿರಿಯರಲ್ಲಿ ಗೌರವ, ಭಕ್ತಿಗಳ ಭಾವದಿಂದ ನಡೆಯುತ್ತಾ ಅವರ ಪ್ರೇಮಾದರಗಳಿಗೆ ಪಾತ್ರರಾಗಬೇಕು. ವಿಧೇಯತೆಯಿಂದ ಇರಬೇಕು,

ತತ್ವನಿಷ್ಠೆಯಲ್ಲಿ ಜಾಗೃತರಾಗಿದ್ದು. ಅನ್ಯಾಯ, ಮೋಸ, ವಂಚನೆ, ಕಪಟ, ಸುಳ್ಳು ಇವುಗಳ ವಿರುದ್ಧ ಹೋರಾಡಿ, ಸುಗುಣಗಳನ್ನು ಎತ್ತಿ ಹಿಡಿಯಬೇಕು. ನೀವು ಮುಂದಿನ ಜೀವನದಲ್ಲಿ ಪಾಲ್ಗೊಂಡು ರಾಜ್ಯದ ರಕ್ಷಕರೂ, ಆಡಳಿತಕಾರರೂ, ಹಿತೈಷಿಗಳೂ, ಧರ್ಮ, ಸಂಸ್ಥಾಪಕರೂ ಆಗ ಬೇಕಾಗಿರುವುದರಿಂದ, ಪ್ರಜೆಗಳ ಮನ ಗೆಲ್ಲಲು ತಾತ್ವಿಕ ಸಿದ್ಧಾಂತಗಳು, ರಾಜಕೀಯ ನೀತಿಗಳನ್ನು ಆಧಾರವಾಗಿಡುವ ಹವ್ಯಾಸಗಳನ್ನು ಮನನ ಮಾಡಬೇಕು. ಪ್ರಪಂಚದ ರೀತಿ, ನೀತಿಗಳು ಬದಲಾವಣೆಯಾಗುತ್ತಿರುವುದರಿಂದ ನೀವು ಹಳೆಯ ಕಂದಾಚಾರಗಳನ್ನು ಮೂಲೆ ಗುಂಪು ಮಾಡಿ ನವೀನ್ಯತೆಯ ಹಾದಿ ಹಿಡಿದು ಕ್ರಮಗಳನ್ನಾಚರಿಸಬೇಕು. ಈರೀತಿ ಮಾಡುವಾಗ ಸಮಾಜದಲ್ಲಿ ಪ್ರತಿ ಪಕ್ಷದವರ ವಿರೋಧ ಬರುವುದುಂಟು. ಆಗ ಜನತೆಯಿಂದ ವಿವಾದಗಳೂ, ಧಾಳಿಗಳೂ, ಹಿಂಸಾಚಾರಗಳೂ ಬಾರದಿರುವುದಿಲ್ಲ. ಆಗ ನೀವು ಶಾಂತಿಯಿಂದ ವರ್ತಿಸಿ, ಸಿಟ್ಟು ಆಕ್ರೋಶಗಳನ್ನು ನಿಗ್ರಹಿಸಿ, ಹಿಂಸಾಕೃತ್ಯಗಳಿಗೆ ಎಡೆಕೊಡದೆ, ಸಂಯಮದಿಂದ ವರ್ತಿಸಬೇಕು. ಪ್ರತಿಪಕ್ಷದವರೊಡನೆ ಸಕಾರಣಗಳಿಂದ ಚರ್ಚಿಸಿ, ನ್ಯಾಯವನ್ನು ಎತ್ತಿಹಿಡಿಯಬೇಕು. ಇದರಿಂದ ಉಭಯ ಪಕ್ಷದವರ ಹಿತ, ಅಭ್ಯುದಯಕ್ಕೆಪ್ರಯತ್ನಿಸುವುದು ಜಾಣತನಕ್ಕೆ ಮಾರ್ಗವೆನಿಸುವುದು.

ಒಂದು ವೇಳೆ ಹಿಂಸಾಕೃತ್ಯಗಳು ಪ್ರಾಪ್ತವಾದಾಗ ವಿವೇಕ ಮಾರ್ಗದಲ್ಲಿ ನಡೆದು, ನಿರಾಪರಾಧಿಗಳ ಆಸ್ತಿ, ವಸ್ತುನಾಶ, ಅಗ್ನಿ ಸ್ಪರ್ಶಗಳು ಇವುಗಳಿಗೆ ದಾರಿ ಕೊಡದೆ, ಎಲ್ಲಾ ಸಮಸ್ಯೆಗಳನ್ನೂ ಪರಸ್ಪರ ಅರಿವು, ಹೊಂದಾಣಿಕೆಗಳ ಮೂಲಕ ಸರ್ವಸಮ್ಮತವಾಗುವ ರೀತಿಯೇ ಜೀವನದ ತಿರುಳು. ಇವೆಲ್ಲಾ ಗುಣಗಳೂ ಕಟ್ಟುಪಾಡಿನ ವಿದ್ಯೆ, ವಿವೇಕ, ಸಮಯ ಸ್ಫೂರ್ತಿ ಇವುಗಳ ಮೂಲಕ ಲಭ್ಯವಾಗುತ್ತದೆ. ●

# ಮಧುಮೇಹ ಕೆಲವು ತಪ್ಪುಕಲ್ಪನೆಗಳು

ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸೊಂಡೂರು, ಬಳ್ಳಾರಿ ಜಿಲ್ಲೆ.

ಮಧುಮೇಹ (ಡಯಬಿಟೀಸ್), ಅಲ್ಸರ್, ರಕ್ತದ ಒತ್ತಡ (ಬ್ಲಡ್‌ಪ್ರೆಶರ್) ಶ್ರೀಮಂತರ ಕಾಹಿಲೆಗಳೆಂದು ಪರಿಗಣಿಸಲ್ಪಟ್ಟಿವೆ. ಜನ ಈಬಗ್ಗೆ ತುಂಬ ಹೆಮ್ಮೆಯಿಂದ ಹೇಳುವುದುಂಟು. ಯಾರ ಮನೆಯಲ್ಲಾದರೂ ಚಹದ ಏರ್ಪಾಡಿದ್ದರೆ ಎಲ್ಲರಿಗೂಕೇಳ ಸುವಂತೆ 'ನಮಗೆ ಸಕ್ಕರೆ ಹಾಕದ ಚಹ' ಎಂದು ಠೀವಿಯಿಂದ ಹೇಳುವರು. ಅಂದರೆ ಮಧುಮೇಹ ರೋಗವು ಘನಸ್ತಿಕೆಯ ಸೂಚಕವೆಂಬಂತೆ ಭಾಸವಾಗುವುದು. ಅಜ್ಞಾನ ದಿಂದಾಗಿ ಇಂತಹವರು ಮನೆಯಲ್ಲೂ ಹಾಗಲಕಾಯಿ ತಿಂದು ತಿಂದು ತಮ್ಮ ರುಚಿ ಕೆಡಿಸಿಕೊಳ್ಳುವರು ಮಧುಮೇಹ ನಿವಾರಣೆಗೆ ಹಾಗಲಕಾಯಿಯಿಂದೇನೂ ಸಹಾಯವಾ ವುದಿಲ್ಲವೆಂಬ ಸತ್ಯ ಸಂಗತಿ ತಿಳಿದರೆ ಬಹುಶಃ ಅವರು ಅದನ್ನು ಅಷ್ಟೊಂದುಬಳಸುತ್ತಿರಲಿಲ್ಲ

ಮಧುಮೇಹ (ಸಕ್ಕರೆ ಕಾಯಿಲೆ) ಎಂದರೇನೆಂದು ನಿಮಗೆ ಗೊತ್ತೇ ಇದೆ. ನಮ್ಮ ದೇಹದಲ್ಲಿ ಸಕ್ಕರೆಯನ್ನು ಜೀರ್ಣಿಸಲು ಇನ್ಸುಲಿನ್ ಎಂಬೊಂದು ಹಾರ್ಮೋನ್ ಇರುತ್ತದೆ. ಈ ಹಾರ್ಮೋನನ್ನು ಪೆಂಕ್ರಿಯಾಸ್ ಎಂಬೊಂದು ಅವಯವ ನಿರ್ಮಿ ಸುತ್ತದೆ. ಕಾರಣಾಂತರದಿಂದ ಪೆಂಕ್ರಿಯಾಸ್ ಶೊಂದರೆಗೊಳಗಾದರೆ, ಇನ್ಸುಲಿನ್ ಯೋಗ್ಯ ಪ್ರಮಾಣದಲ್ಲಿ ದೊರೆಯುವುದಿಲ್ಲ. ಆಗ ಸಕ್ಕರೆ ಸರಿಯಾಗಿ ಜೀರ್ಣ ಹೊಂದುವುದಿಲ್ಲ. ಪರಿಣಾಮವಾಗಿ ರಕ್ತ ಹಾಗೂ ಮೂತ್ರದಲ್ಲಿ ಸಕ್ಕರೆ ಪ್ರಮಾಣ ಬಹಳಷ್ಟು ಹೆಚ್ಚುವುದು. ಜತೆಗೆ ಇನ್ನೂ ಹಲವುಸಮಸ್ಯೆಗಳು ತಲೆದೋರುವುವು.

ಮಧುಮೇಹಕ್ಕೆ ಪೆಂಕ್ರಿಯಾಸ್ ಕೆಡುವುದೇ ಮೂಲ ಕಾರಣವೆಂದು ನಿಮಗೆ ಈಗಲಾದರೂ ಮನದಟ್ಟಾಗಿರಬಹುದು. ಕೆಟ್ಟ ಈ ಭಾಗವನ್ನು ದುರಸ್ತಿ ಪಡಿಸಲು ಸಾಧ್ಯವಿಲ್ಲವೆ?—ಎಂದು ನೀವು ಕೇಳಬಹುದು. ಈ ಪ್ರಶ್ನೆಗೆ 'ಇಲ್ಲ' ಎಂಬುದೇ ನೇರ ಉತ್ತರ. ಹಾಳಾದ ಈ ಭಾಗವನ್ನು ಸರಿಪಡಿಸಲು ಯಾವುದೇ ಕ್ರಮ ಸದ್ಯಕ್ಕಂತೂ ಇಲ್ಲ. ಎಂತಲೇ ಅದು ಕೆಡುವ ಮೊದಲೇ ಹಾಗಾಗದಂತೆ ಎಚ್ಚರ ವಹಿಸಬೇಕು. ವಾಸ್ತವವಾಗಿ ಪೆಂಕ್ರಿಯಾಸ್ ಕೆಡಲು ಕಾರಣ ಏನೆಂಬುದನ್ನು ಸರಿಯಾಗಿ ಶೋಧಿಸಲು ವಿಜ್ಞಾನಿಗಳಿಗೆ ಇದುವರೆಗೂ ಸಾಧ್ಯವಾಗಿಲ್ಲ. ಇದು ಆನುವಂಶಿಕವಾಗಿಯೂ ಬಂದಡರುವುದು.

ಈ ರೋಗದಲ್ಲಿ ಯಾವುದೋ ಅಜ್ಞಾತ ವೈರಸದ ಕೈವಾಡ ಇರಬಹುದೆಂದೂ ಕೆಲವರ ಊಹೆ. ಆದರೆ ಅದಕ್ಕೆ ಅಗತ್ಯವಾದ ರುಜುವಾತುಗಳು ದೊರೆಯುವ ವರೆಗೆ, ಮಧುಮೇಹದ ರೋಗಿಗಳು ರೋಗ ಬಂದ ಬಳಿಕ ಅನುಸರಿಸಬೇಕಾದ ಕ್ರಮಗಳನ್ನು ಅರಿತುಕೊಳ್ಳುವುದು ಮೇಲು. ಮಧುಮೇಹದ ರೋಗದ ಜತೆಬದುಕುವು ದೇನೂ ಕಷ್ಟಕರವಲ್ಲವೆಂದು ಅವರಿಗೆ ಸ್ವತಃ ಮನದಟ್ಟಾಗುವುದು.

ಈ ಕಾಯಿಲೆಯ ಬಗ್ಗೆ ಜನ ವಿಧವಿಧದ ಭ್ರಾಂತಿಗಳನ್ನು ಹೊಂದಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗುವುದು :—

ಒಮ್ಮೆ ಮಧುಮೇಹ ರೋಗ ತಗಲಿತೆಂದರೆ ಜೀವಮಾನವಿಡೀ ಇನ್ಸುಲಿನ್ ಚುಚ್ಚುಮದ್ದು ಹಾಕಿಸಬೇಕಾಗುವುದೆಂದು ಕೆಲವರು ಹೆದರುತ್ತಾರೆ. ಇದು ಬರೇಭ್ರಾಂತಿ. ಬಾಲ್ಯದಲ್ಲಿ ಈ ಕಾಹಿಲೆಗೀಡಾದವರಷ್ಟೇ ಆಜೀವನ ಇನ್ಸುಲಿನ್ ತೆಗೆದುಕೊಳ್ಳ ಬೇಕಾಗುವುದು. ದೊಡ್ಡವರಿಗೆ ಆಕಸ್ಮಾತ್ ಈ ರೋಗ ತಗಲಿದರೆ ಅವರ ದೇಹದಲ್ಲಿನ ಇನ್ಸುಲಿನ್ ಮಾಯವಾಗುವುದಿಲ್ಲ. ಅದು ದೇಹದಲ್ಲಿ ಸಾಕಷ್ಟಿದ್ದರೂ ಸಕ್ಕರೆಯ ಪ್ರಮಾಣ ತಗ್ಗಿಸಲು ನೆರವಾಗುವುದಿಲ್ಲವಷ್ಟೇ.

ವಯಸ್ಸಾದವರಲ್ಲಿ 20% ರಷ್ಟು ಜನ ಮಾತ್ರ ನಿಯಮಿತವಾಗಿ ದೀರ್ಘಕಾಲ ಇನ್ಸುಲಿನ್ ತೆಗೆದುಕೊಳ್ಳಬೇಕಾಗುತ್ತದೆ. ವಾಸ್ತವವಾಗಿ ಇವರಿಗೆ ಮಧುಮೇಹದ ಜತೆ ಇನ್ನಾವುದಾದರೂ ಕಾಹಿಲೆ ಅಂಟಿರುತ್ತದೆ. ಹೆಚ್ಚಿನ ರೋಗಿಗಳು ತಮ್ಮ ಭಾರದ ಬಗ್ಗೆ ಲಕ್ಷ್ಯವಹಿಸಿದರೆ, ವ್ಯಾಯಾಮದಿಂದ ದೇಹವನ್ನು ಚುರುಕಾಗಿಟ್ಟುಕೊಂಡರೆ, ಪಥ್ಯ ಮಾಡುತ್ತಿದ್ದರೆ, ತಮ್ಮ ಜೀವನವನ್ನು ಆರಾಮವಾಗಿ ಕಳೆಯಬಲ್ಲರು.

ಕೆಲವರು ಅಕ್ಕಿ ಹಾಗೂ ಬಟಾಟೆಯನ್ನು ವೈರಿಯಂತೆ ಕಾಣುತ್ತಾರೆ. ಇದು ಕೂಡ ಭ್ರಮೆಯೆನ್ನಬೇಕು. ಬರೇ ಅನ್ನಉಂಡರೆ ಅಥವಾ ಬಟಾಟೆಯ ಪದಾರ್ಥ ಬಳಸಿದರೆ ಮಧುಮೇಹ ಉಂಟಾಗುತ್ತದೆಂದು ಕೆಲವರು ಹೇಳುತ್ತಾರೆ. ಮಧುಮೇಹ ಬಂದಾಗ ಇವೆರಡರ ಬಳಕೆಯನ್ನು ಕಡಿಮೆಗೊಳಿಸಬಹುದು. ಆದರೆ ಸ್ವಸ್ಥವ್ಯಕ್ತಿಗೆ ಇವು ಎಂದೂ ಹಾನಿಯುಂಟು ಮಾಡುವುದಿಲ್ಲ.

ಅಕ್ಕಿ ಬಟಾಟೆಗಳಿಂದ ಬೊಜ್ಜು ಬೆಳೆಯುತ್ತಿದೆಯೆಂಬ ಭ್ರಮೆಯೂ ಕೆಲವರಲ್ಲಿ ಬೇರೂರಿದೆ. ಗೋಧಿ ಜೋಳಗಳಲ್ಲೂ ಅಕ್ಕಿ ಬಟಾಟೆಗಳಂತೆಯೇ ಶರ್ಕರಪಿಷ್ಟ ತುಂಬಿ ಕೊಂಡಿದೆ. ಅನ್ನವೇ ಪ್ರಪಂಚದ ಅರ್ಧದಷ್ಟು ಜನರ ಮುಖ್ಯ ಆಹಾರ. ಹೀಗಿರುವಾಗ ಅದು ಮಧುಮೇಹ ಬರಿಸುತ್ತಿದೆನ್ನುವುದು ಸರಿಯಲ್ಲ.

ಭಾರತೀಯರಲ್ಲಿ ಮನೆಮಾಡಿರುವ ಅತಿದೊಡ್ಡ ಭ್ರಾಂತಿಯೆಂದರೆ ಔಷಧ ಕಹಿಯಾಗಿದ್ದರೇನೇ ಹೆಚ್ಚುಲಾಭಕರ ಎಂಬುದು. ಹಳೆಯಕಾಲದ ಯುನಾನಿ ಔಷಧಿಗಳು ಈಗಲೂ ಸಾಕಷ್ಟು ಮಾರಾಟವಾಗುತ್ತಿರುವುದು ಈ ಒಂದು ಗುಣದಿಂದಲೇ. ಹಾಗಲಕಾಯಿ ಮಧುಮೇಹಕ್ಕೆ ಪಥ್ಯ ಎಂಬ ಭಾವನೆ ಮೂಡಲು ಇದೇ ಕಾರಣ.

ನೀವು ಬೇಕಿದ್ದರೆ ಇದನ್ನು ನಂಬಿರಿ, ಆದರೆ ಅಮೇರಿಕೆಯ ಮೆಡಿಕಲ್ ಅಸೋಸಿಯೆ
ಶನ್‌ದ ವಿಜ್ಞಾನಿಗಳು ಈ ಕುರಿತು ಶೋಧನೆಡೆಸಿ ರಕ್ತದಲ್ಲಿನ ಸಕ್ಕರೆಯ ಪ್ರಮಾ
ತಗ್ಗಿಸಲು ಹಾಗಲಕಾಯಿಯಿಂದ ಒಂದಿಷ್ಟೂ ಸಹಾಯವಾಗುವುದಿಲ್ಲವೆಂದು ತಿಳಿಸಿದ್ದಾ
ಇದು ಕಹಿ ಸೋರೆಕಾಯಿಗೂ ಅನ್ವಯಿಸುತ್ತದೆ. ಇದರಿಂದ ನಿಮ್ಮ ನಾಲಗೆಯಪ
ಕಹಿಯಾಗಬಲ್ಲದು. ಈ ಮಾತು ಉಪವಾಸಕ್ಕೂ ಅನ್ವಯಿಸುವುದು. ನಮ್ಮಲ್ಲಿ ವ್ರ
ಉಪವಾಸಗಳಿಗೆ ಬಹಳಷ್ಟು ಮಹತ್ವವಿದೆ. ಪಕ್ಷಕ್ಕೊಮ್ಮೆ ಉಪವಾಸ ಮಾಡುವು
ಆರೋಗ್ಯದೃಷ್ಟಿಯಿಂದ ಹಿತಕರ. ಆವೇಳೆ ಬೇರೇನೂ ತಿನ್ನಬಾರದು. ಆದರೆ ಉಪವ
ದಿಂದ ಮಧುಮೇಹದ ರೋಗಿಗಳಿಗೆ ಲಾಭವಾದೀತೆಂದು ಭಾವಿಸುವುದು ತಪ್ಪು
ಇದಕ್ಕಿಂತ ಸಮತೂಕದ ಆಹಾರ ತೆಗೆದುಕೊಳ್ಳುವುದೇ ಉತ್ತಮ.

ಮಧುಮೇಹದ ಔಷಧಗಳು ಹೃದಯಕ್ಕೆ ಹಾನಿಕರವೆಂಬ ಬಗ್ಗೆ ಸಾಕಷ
ಚರ್ಚೆ ನಡೆಯುತ್ತಿದೆ. ಯಾವುದೇ ಔಷಧವೂ ಪೂರ್ತಿ ನಿರಪಾಯಿಯಲ್ಲ. ಅ
ದೇಹಕ್ಕೆ ಸ್ವಲ್ಪಾದರೂ ಹಾನಿ ಉಂಟುಮಾಡುವುದು. ಆದ್ದರಿಂದ ನಿಶ್ಚಿತ ಪ್ರಮಾಣ
ಔಷಧಿಯನ್ನಷ್ಟೇ ಸೇವಿಸಬೇಕು. ಆಹಾರದಲ್ಲಿ ಪಿಷ್ಟವನ್ನು ಕಡಿಮೆಮಾಡಿ ಪ್ರೊಟೀನ
ಉಳ್ಳ ವಸ್ತುಗಳನ್ನು ಹೆಚ್ಚಿಸಬೇಕು. ತುಪ್ಪ ಅಥವಾ ವನಸ್ಪತಿ ತುಪ್ಪಕ್ಕಿಂ
ಎಣ್ಣೆ ಉತ್ತಮ.

ವ್ಯಾಯಾಮ ತುಂಬ ಶ್ರೇಷ್ಠವಾದುದೆಂದು ಒಂದೇ ಸಮನೆ ಅದರ ಗುಣಗಾ
ಮಾಡಲಾಗುತ್ತದೆ. ಕೆಲದಶಕಗಳ ಹಿಂದೆ ಬರ್ನಾಲ್ ಮೆಕಫೇಡನ್‌ರಂತಹ ಜನ
ವ್ಯಾಯಮವೇ ಎಲ್ಲ ಕಾಹಿಲೆಗಳಿಗೂ ರಾಮಬಾಣವೆಂದು ಪ್ರತಿಪಾದಿಸುತ್ತಿದ್ದರ
ಇಂದೂ ಅಂತಹ ವಿಚಾರವುಳ್ಳವರು ಹಲವರಿದ್ದಾರೆ. ವ್ಯಾಯಾಮ ಮಧುಮೇಹವ
ದೂರಗೊಳಿಸುವುದೆಂದು ಇದುವರೆಗಿನ ಪ್ರಯೋಗಗಳಿಂದ ರುಜುವಾತಾಗಿಲ್ಲ. ದೇ
ಚಟುವಟಿಕೆಯಿಂದಿರಲು ವ್ಯಾಯಾಮ ಸಹಾಯ ಮಾಡಬಲ್ಲದು. ಆದ್ದರಿಂ
ಅಲ್ಪಸ್ವಲ್ಪ ವ್ಯಾಯಾಮ ಮಾಡಬಹುದು. ಆಗ ಎಂತಹ ಗಂಭೀರ ಪರಿಸ್ಥಿತಿಯನ್
ಸುಲಭವಾಗಿ ಸಹಿಸಬಹುದು.

ಮಧುಮೇಹದ ರೋಗಿಣಿ ಗರ್ಭಧರಿಸಬಾರದೆಂಬ ಭ್ರಮೆಯೂ ಜನರಲ್ಲಿ
ಆದರೆ ಅದಕ್ಕೂ ಆಧಾರವಿಲ್ಲ. ಗರ್ಭಿಣಿ ನಿಯಮಿತವಾಗಿ ವೈದ್ಯಕೀಯ ಪರಿ
ಮಾಡಿಸಿಕೊಳ್ಳುತ್ತಿದ್ದರೆ, ಅವಳಿಗಾಗಲೀ, ಹುಟ್ಟುವ ಮಕ್ಕಳಿಗಾಗಲೀ ಯಾವು
ಅಪಾಯ ತಟ್ಟಲಾರದು. ●

(ಹಿಂದಿಯಿಂ

# ಗ್ರಾಮ ಸುಧಾರಣೆ ಯೋಜನೆಗಳಲ್ಲಿ ತರುಣ ರೈತರ ಪಾತ್ರ

ಡಿ. ವೆಂಕಟರಾವ್, ಎಂ.ಎ., ಅರ್ಥಶಾಸ್ತ್ರಪ್ರವಾಚಕರು, ಸರ್ಕಾರಿ ಕಲಾ ಕಾಲೇಜ್, ಹಾಸನ.

ಯಾವುದೇ ದೇಶದ ಆರ್ಥಿಕ ಅಭಿವೃದ್ಧಿಯಾಗಬೇಕಾದರೆ ಅಲ್ಲಿ ಲಭ್ಯವಿರುವ ನೈಸರ್ಗಿಕ ಸಂಪನ್ಮೂಲಗಳು ಮತ್ತು ಜನಶಕ್ತಿಯ ಪೂರ್ಣ ಉಪಯೋಗ ಆರ್ಥಿಕ ಕ್ಷೇತ್ರದಲ್ಲಿ ಶಾಸ್ತ್ರೋಕ್ತವಾಗಿ ಸಂಘಟಿತವಾಗಬೇಕಾಗುತ್ತದೆ. ದ್ವಿತೀಯ ಮಹಾ ಯುದ್ಧದಲ್ಲಿ ಪೂರ್ಣವಾಗಿ ಸೋಲನ್ನಪ್ಪಿ ನೆಲಸಮವಾದ ಜಪಾನ್, ಜರ್ಮನಿ ರಾಷ್ಟ್ರಗಳು ಕೇವಲ ಮುಂದಿನ 20 ವರ್ಷಗಳಲ್ಲಿ ಸತತ ಪ್ರಯತ್ನದ ಫಲವಾಗಿ ಚೇರಿಸಿ ಕೊಂಡು ಇಂದು ಪ್ರಪಂಚದ ಮುಂದುವರಿದ ಅಮೆರಿಕ, ರಷ್ಯಾ ಮುಂತಾದ ದೇಶ ಗಳ ಜೊತೆಗೆ ಪುನಃ ಆರ್ಥಿಕ ಕ್ಷೇತ್ರದಲ್ಲಿ ಸ್ಪರ್ಧಿಸುತ್ತಿರುವುದು ಈ ಮಾತಿಗೆ ಉತ್ತಮ ನಿದರ್ಶನ. ಮುಖ್ಯವಾಗಿ ಜನತೆಯ ಸ್ವಾಭಿಮಾನ, ಕಷ್ಟ ಸಹಿಷ್ಣುತೆ, ವೈಜ್ಞಾನಿಕ ಮನೋವೃತ್ತಿಯೇ ಆ ದೇಶಗಳ ಕ್ಷಿಪ್ರ ಪ್ರಗತಿಗೆ ಮೂಲಾಧಾರವಾಗಿವೆ. ಸ್ವಾತಂತ್ರ್ಯ ನಂತರ ನಮ್ಮ ದೇಶದಲ್ಲಿ ಪಂಚವಾರ್ಷಿಕ ಯೋಜನೆಗಳ ಮೂಲಕ ರಾಷ್ಟ್ರದ ಸರ್ವತೋ ಮುಖ ಅಭಿವೃದ್ಧಿಗಾಗಿ ಸರಕಾರ ಸತತವಾಗಿ ಪ್ರಯತ್ನಿಸುತ್ತಿದೆ. ಆದಾಗ್ಯೂ ನಮ್ಮ ದೇಶ ಮುಂದುವರಿದ ದೇಶಗಳೊಂದಿಗೆ ಹೋಲಿಸಿದಾಗ ಅನೇಕ ವಿಷಯಗಳಲ್ಲಿ ಹಿಂದುಳಿದಿರುವುದು ಕಂಡುಬರುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಅಭಿವೃದಿ ಯೋಜನೆಗಳಲ್ಲಿ ಜನತೆ ರಾಷ್ಟ್ರೀಯ ಮನೋಭಾವನೆಯಿಂದ ಮನಃಪೂರ್ವಕವಾಗಿ ಪಾಲ್ಗೊಳ್ಳದಿರುವುದು. ನಮ್ಮ ದೇಶ ಸ್ವಾವಲಂಬಿಯಾಗಿ ಬೆಳಗಬೇಕಾದರೆ ಪ್ರತಿ ಯೊಬ್ಬ ನಾಗರಿಕನೂ ಜಾಗೃತನಾಗಿ, ದೇಶದ ಸ್ಥಿತಿಗತಿಗಳನ್ನರಿತು ಅಭಿವೃದ್ಧಿ ಕ್ಷೇತ್ರ ದಲ್ಲಿ ಮುಕ್ತ ಮನಸ್ಸಿನಿಂದ ಪಾತ್ರ ವಹಿಸಬೇಕು.

ಕೃಷಿ ಪ್ರಧಾನವಾದ ಭಾರತ ದೇಶದಲ್ಲಿ ಶೇ. 68 ರಷ್ಟು ಜನ ಕೃಷಿಯಲ್ಲಿ ನಿರತರಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ದೇಶದ ಉತ್ಪಾದನೆ ಮತ್ತು ಆದಾಯದಲ್ಲಿ ಅರ್ಧಭಾಗದಷ್ಟು ಕೃಷಿಯಿಂದ ದೊರೆಯುತ್ತಿದೆ. ಇಷ್ಟೊಂದು ಅಧಿಕ ಪ್ರಮಾಣದಲ್ಲಿ ಉದ್ಯೋಗ ಮತ್ತು ಆದಾಯಗಳನ್ನು ಒದಗಿಸುತ್ತಿರುವ ಕೃಷಿ ಮಾತ್ರ ನಮ್ಮ ದೇಶದಲ್ಲಿ ಇನ್ನೂ ಹಿಂದಿನ ಪದ್ಧತಿಯಂತೆಯೇ ನಡೆದು ಬರುತ್ತಿದೆ. ಇತರ ಔದ್ಯೋಗಿಕ, ವಾಣಿಜ್ಯ ಕ್ಷೇತ್ರಗಳಲ್ಲಿ ಆಗಿರುವ ಸುಧಾರಣೆಗೆ ಹೋಲಿಸಿದರೆ ಕೃಷಿ ಕ್ಷೇತ್ರದಲ್ಲಿ ಆಗಿರುವ ಸುಧಾರಣೆ ಬಹಳ ಕಡಿಮೆ. ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮ ರೈತರು ವೈಜ್ಞಾನಿಕ ಸುಧಾರಣೆಗನ್ನು ಅರಿತು ಅನುಷ್ಠಾನಕ್ಕೆ ತರುವಷ್ಟು ವಿದ್ಯಾವಂತರಲ್ಲ ಹಾಗೂ ಅವರ ಹಳ್ಳಿಯ ವಾಸ ಮತ್ತು ಬಡತನದ ಸ್ಥಿತಿಗಳು ಮುಂದುವರಿದ ನಾಗರಿಕ ಜನತೆಯೊಂದಿಗೆ ಬೆರೆತು ಪ್ರಗತಿಪರ ವಿಚಾರಗಳನ್ನು ತಿಳಿದು ಕೊಳ್ಳಲು ಅವಕಾಶ ಕೊಡುವುದಿಲ್ಲ. ವ್ಯವಸಾಯಗಾರರ ಸ್ಥಿತಿ ಬದಲಾಗಬೇಕಾದರೆ

ಗ್ರಾಮಾಂತರ ಪ್ರದೇಶದಲ್ಲಿರುವ ವಿದ್ಯಾವಂತ ತರುಣ ರೈತರು ಜಾಗೃತರಾಗಿ, ಕೃಷಿಯ ಅಭಿವೃದ್ಧಿ ಹಾಗೂ ಗ್ರಾಮ ಸುಧಾರಣೆ ಯೋಜನೆಗಳಲ್ಲಿ ಸ್ವಯಂ ಸ್ಫೂರ್ತಿಯಿಂದ ಸಂಘಟಿತರಾಗಿ ತಮ್ಮ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ರೂಢಿಯಲ್ಲಿ ತರುವಂತೆ ಕಾರ್ಯ ಪ್ರವೃತ್ತರಾಗಬೇಕು. ಇಂದಿನ ತರುಣರೇ ಮುಂದಿನ ಪ್ರಬುದ್ಧ ರೈತರಾಗುವುದರಿಂದ ಈ ಕಾರ್ಯವನ್ನು ಅವರು ಶ್ರದ್ಧೆಯಿಂದ ಮಾಡಿದಷ್ಟು ತೀವ್ರ ಅಭಿವೃದ್ಧಿ ಆಗುತ್ತದೆ.

**ಕೃಷಿ ಕ್ಷೇತ್ರದಲ್ಲಿ ಬದಲಾವಣೆ :-**

ಹಿಂದಿನ ಹಾಗೂ ಇಂದಿನ ಕೃಷಿಯಲ್ಲಿ ಭಾರಿ ಸ್ಥಿತ್ಯಂತರಗಳು ನಡೆದಿವೆ. ಈ ಮಧ್ಯಂತರದಲ್ಲಿ ಮಣ್ಣಿನ ಬಗೆಗಿನ ಜ್ಞಾನ ಅಧಿಕ ಗೊಂಡಿದೆ. ಸಸ್ಯಪೋಷಣೆಯ ಮೇಲೆ ಹೊಸಬೆಳಕು ಚೆಲ್ಲಲ್ಲಾಗಿದೆ. ಅದ್ಭುತಶಕ್ತಿಯ ಬೀಜಗಳು ಮೈದಾಳಿವೆ. ಸಸ್ಯಾಹಾರ ವೈವಿಧ್ಯತೆಯ ವಿವರಗಳನ್ನು ಸಂಗ್ರಹಿಸಲಾಗಿದೆ. ಉಳುವ ಬಿತ್ತುವ ಪರಿಣಾಮಕಾರಿ ಕ್ರಮ ಕಂಡುಹಿಡಿಯಲಾಗಿದೆ. ಬೆಳೆ ರಕ್ಷಣೆಯ ಅರಿವನ್ನು ಜನರಲ್ಲಿ ಮೂಡಿಸಲಾಗಿದೆ. ನೀರಾವರಿ ಬೇಸಾಯ ವಿಸ್ತರಣೆ, ರಾಸಾಯನಿಕ ಗೊಬ್ಬರ, ಕ್ರಿಮಿಕೀಟ ನಾಶಕಗಳು, ನೂತನ ಯಂತ್ರೋಪಕರಣಗಳು, ಕೃಷಿಕ್ಷೇತ್ರವನ್ನು ಪ್ರವೇಶಿಸಿವೆ, ಇವುಗಳ ಅನುಷ್ಠಾನ ಕೃಷಿ ಅಭಿವೃದ್ಧಿಯಲ್ಲಿ ಒಂದು ಮೈಲಿಗಲ್ಲು. ಇದರ ಫಲವಾಗಿ ಜೀವನಾಧಾರ ಕೃಷಿ ವಾಣಿಜ್ಯ ಕೃಷಿಯಾಗಿ ಪರಿವರ್ತನೆಗೊಂಡಿದೆ. ಈ ಅಸ್ಫೋಟನೆಯೇ ಹಸಿರು ಕ್ರಾಂತಿ. ಆದರೆ ನಿಜವಾದ ಹಸಿರು ಕ್ರಾಂತಿಯಾಗ ಬೇಕಾದರೆ ನಮ್ಮ ಭೂಮಿಯ ಎಕರೆವಾರು ಉತ್ಪಾದನೆಯು ಮುಂದುವರಿದ ದೇಶಗಳ ಸರಿಸಮ ಪ್ರಮಾಣದಷ್ಟು ಹೆಚ್ಚುವರಿಯಾಗಬೇಕು. ಇದಲ್ಲದೆ ನಮ್ಮ ರೈತರು ಈ ಎಲ್ಲಾ ಸುಧಾರಣೆಯ ಕ್ರಮಗಳನ್ನು ಅರಿತುಕೊಂಡು ತಮ್ಮ ನಿತ್ಯ ವ್ಯವಸಾಯದಲ್ಲಿ ಪರಸಹಾಯವಿಲ್ಲದೆ ಸ್ವಂತಜ್ಞಾನದಿಂದ ಅನುಷ್ಠಾನದಲ್ಲಿ ತರುವಷ್ಟು ತಿಳುವಳಿಕೆಯುಳ್ಳ ವರಾಗಬೇಕು. ಏಕೆಂದರೆ ರೈತರು ನಿತ್ಯ ವ್ಯವಸಾಯವನ್ನು ಸುಧಾರಿಸಿದ ಪದ್ಧತಿಯಿಂದ ಮಾಡಲು ಸ್ವತಃ ಸಮರ್ಥರಾದಾಗ ಮಾತ್ರ ದೇಶದಲ್ಲಿ ವ್ಯವಸಾಯಾಭಿವೃದ್ಧಿ ಸ್ಥಿರವಾಗಿ ಉಳಿಯಲು ಸಾಧ್ಯ. ಈ ದೃಷ್ಟಿಯಿಂದ ನಮ್ಮ ತರುಣ ರೈತರು ನೂತನ ಸುಧಾರಣಾ ಕ್ರಮಗಳಲ್ಲಿ ತರಬೇತಿ ಪಡೆದು, ತಮ್ಮ ಗ್ರಾಮದಲ್ಲಿನ ವ್ಯವಸಾಯ ಸುಧಾರಣೆಯಲ್ಲಿ ಹಿರಿಯ ರೈತರಿಗೆ ಸಹಾಯ ಮಾಡುವುದು ಅಗತ್ಯ. ಈದಿಶೆಯಲ್ಲಿ ತರುಣ ರೈತರು ತಾವೇ ಸಂಘಟಿತರಾಗಿ ಅವಶ್ಯವಾದ ವಿಚಾರಗಳಲ್ಲಿ ವೈಜ್ಞಾನಿಕ ಮತ್ತು ತಾಂತ್ರಿಕ ತರಬೇತಿ ಪಡೆಯಲು ಮುಂದಾಗಬೇಕು. ಕೇವಲ ಕೃಷಿ ಅಭಿವೃದ್ಧಿಯಲ್ಲದೆ ನಾಗರಿಕ ಜೀವನದ ಗೊತ್ತು ಗುರಿಗಳ ವಿಚಾರಗಳು, ಆರೋಗ್ಯಕರವಾದ ವಾಸಸ್ಥಳ, ಪೌಷ್ಠಿಕ ಆಹಾರ, ಗ್ರಾಮದಲ್ಲಿ ಕೈಗೊಳ್ಳಬಹುದಾದ ಹೈನುಗಾರಿಕೆ, ಕೋಳಿಸಾಕಾಣಿಕೆ, ಗೃಹಕೈಗಾರಿಕೆ, ರೇಷ್ಮೆ ಹುಳು ಸಾಕುವಿಕೆ ಮೊದಲಾದ ಉಪಕಸಬುಗಳ ವಿಚಾರದಲ್ಲೂ ಸಾಕಷ್ಟು ಪರಿಜ್ಞಾನವನ್ನು ಅವರು ಪಡೆಯುವುದು ಅವಶ್ಯಕ.

**ತರಬೇತಿ ಸೌಲಭ್ಯಗಳು :-**

ಈಗಾಗಲೇ ಕೇಂದ್ರ ಮತ್ತು ರಾಜ್ಯಸರಕಾರಗಳು ತರುಣ ರೈತರ ಹಾಗೂ ಸಾಮಾನ್ಯ ರೈತರ ತರಬೇತಿಗಾಗಿ ಅನೇಕ ಕಾರ್ಯಕ್ರಮಗಳ ಮೂಲಕ ವ್ಯವಸ್ಥೆ ಮಾಡಿವೆ ಹಾಗೂ ಹೆಚ್ಚಿನ ತರಬೇತಿ ಕಾರ್ಯಕ್ರಮಗಳನ್ನು ಸೂಚಿಸುತ್ತಿವೆ. ಕೃಷಿ ಇಲಾಖೆಗಳು ಈಗಾಗಲೇ ಗ್ರಾಮಾಂತರ ತರಬೇತಿ ಕೇಂದ್ರಗಳ ಮೂಲಕ ರೈತರಿಗೆ, ತರುಣ ರೈತರಿಗೆ ಸುಧಾರಿತ ಬೇಸಾಯ ಕ್ರಮಗಳಲ್ಲಿ ತರಬೇತಿ ವ್ಯವಸ್ಥೆ ಮಾಡುತ್ತಿವೆ, ಅದರಂತೆ ಕೃಷಿ ವಿಶ್ವವಿದ್ಯಾಲಯದವರು ರೈತ ತರಬೇತಿ ಕೇಂದ್ರದ ಮೂಲಕ ತರಬೇತಿ ವ್ಯವಸ್ಥೆ ಮಾಡಿದ್ದಾರೆ. ಆಯಾಪ್ರದೇಶದ ಮುಖ್ಯ ಬೆಳೆಗಳ ಮತ್ತು ತರುಣ ರೈತರಿಗೆ ಆಸಕ್ತಿ ಇರುವ ಬೆಳೆಗಳ ಕೃಷಿ ವಿಧಾನವನ್ನು ವೈಜ್ಞಾನಿಕ ರೀತಿಯಲ್ಲಿ ಬೋಧಿಸುವುದು ಹಾಗೂ ಅವರಲ್ಲಿ ಕೃಷಿವಿಧಾನಗಳನ್ನು ಕುರಿತ ಜ್ಞಾನ ಮತ್ತು ಮೂಢನಂಬಿಕೆಗಳನ್ನು ಹೋಗಲಾಡಿಸುವುದು ಇದರ ಉದ್ದೇಶ. ಕರ್ನಾಟಕ ರಾಜ್ಯದಲ್ಲಿ ಇಂತಹ ಹನ್ನೊಂದು ತರಬೇತಿ ಕೇಂದ್ರಗಳು ಕೆಲಸ ಮಾಡುತ್ತಿವೆ. ಇವುಗಳಲ್ಲಿ ಒಂದು ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯಕ್ಕೆ ಸೇರಿದ್ದು, ಉಳಿದವು ಬೇರೆ ಜಿಲ್ಲೆಗಳಲ್ಲಿದ್ದು ಕೃಷಿ ಇಲಾಖೆಗೆ ಸೇರಿವೆ. ಬೆಂಗಳೂರಿನ ಸಂಸ್ಥೆಯು ಡೆನ್ಮಾರ್ಕ್ ನೆರವಿನಿಂದ ನಡೆಯುತ್ತಿದೆ. ಈ ತರಬೇತಿ ಶಿಬಿರಕ್ಕೆ ವಿವಿಧ ತಾಲ್ಲೋಕುಗಳಿಂದ ತರುಣ ರೈತರನ್ನು ಆಯಾ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಆಯ್ಕೆ ಮಾಡಿಕಳಿಸುತ್ತಾರೆ. ತರಬೇತಿ ನೀಡುವಷ್ಟು ದಿನವೂ ಊಟ, ವಸತಿ, ಎಲ್ಲವನ್ನು ಸಂಸ್ಥೆಯೇ ಭರಿಸುತ್ತದೆ. ಕೃಷಿ ವಿಶ್ವವಿದ್ಯಾಲಯದ ತಜ್ಞರು ಬಂದು ಶಿಬಿರಾರ್ಥಿಗಳಿಗೆ ಅಮೂಲ್ಯ ಸಲಹೆಗಳನ್ನು ನೀಡಿ ವಿಶ್ವವಿದ್ಯಾಲಯದ ಪ್ರಯೋಗ ತಾಕುಗಳಿಗೆ ಕರೆದೊಯ್ದು ವಿವರಣೆ ನೀಡುತ್ತಾರೆ. ಶಿಬಿರ ಮುಗಿದ ಮೇಲೆ ತಮ್ಮ ಸ್ವಂತ ಜಮೀನಿನಲ್ಲಿ ಹೊಸ ವಿಧಾನವನ್ನು ಪರೀಕ್ಷಿಸುವಾಗ ಏನಾದರೂ ಸಂದೇಹಗಳು ಬಂದಲ್ಲಿ ತರುಣ ರೈತರು ಪತ್ರ ಬರೆದು ಉತ್ತರ ಪಡೆಯಬಹುದು. ತರಬೇತಿ ಪಡೆದವರು ತಮ್ಮ ಹಳ್ಳಿಗಳಲ್ಲಿ ಚರ್ಚಾಮಂಡಲಿಗಳನ್ನು ಕಟ್ಟಿಕೊಂಡು ಹೊಸ ಕೃಷಿ ವಿಧಾನಗಳ ಮಾಹಿತಿಯನ್ನು ಇತರರೊಂದಿಗೆ ಹಂಚಿಕೊಳ್ಳುವಂತೆಯೂ ಉತ್ತೇಜನ ನೀಡಲಾಗುತ್ತದೆ.

ಇದರಂತೆಯೇ ಪಶು ಸಂಗೋಪನಾ ಇಲಾಖೆಯಾವರು ಹೈನು ಉದ್ಯಮ, ಕೋಳಿ ಮುಂತಾದ ವಿಷಯಗಳಲ್ಲಿ ಮತ್ತು ತೋಟಗಾರಿಕೆ ಇಲಾಖೆಯುವರು ತೋಟಗಾರಿಕೆ ವಿಷಯದಲ್ಲಿ ಸೂಕ್ತವಾದ ಪ್ರತ್ಯೇಕ ತರಬೇತಿ ಕಾರ್ಯಕ್ರಮವನ್ನು ಏರ್ಪಡಿಸಿದ್ದಾರೆ. ರೈತರ ತರಬೇತಿಯ ಮಹತ್ವವನ್ನರಿತು ಕೃಷಿ ಇಲಾಖೆಯವರು ಪ್ರತ್ಯೇಕ ವಿಭಾಗವೊಂದನ್ನು ರಚಿಸಿ, ಜಾಯಿಂಟ್ ಡೈರೆಕ್ಟರ್ ದರ್ಜೆಯ ಒಬ್ಬಅಧಿಕಾರಿಯನ್ನು ನೇಮಿಸಿರುತ್ತಾರೆ. ಇದರಿಂದ ತರುಣ ರೈತರ ತರಬೇತಿಗೆ ವಿಶೇಷಗಮನ ಕೊಡಲು ತುಂಬಾ ಸಹಕಾರಿಯಾಗಿದೆ. ತರುಣ ರೈತರಿಗೆ ಮತ್ತು ಸಾಮಾನ್ಯ ರೈತರಿಗೆ

ನೀಡುತ್ತಿರುವ ತರಬೇತಿ ವಿಷಯಗಳೆಂದರೆ ಸುಧಾರಿತ ಕೃಷಿ ಕ್ರಮಗಳು, ನೀರಾವರಿ ಬೇಸಾಯ, ಭೂ ಸಂರಕ್ಷಣೆ ಮತ್ತು ಒಣ ಬೇಸಾಯ, ಜಿನುಗುಭೂಮಿ ಸುಧಾರಣೆ ಹೆಚ್ಚು ಇಳುವರಿ ಸಂರಕ್ಷಣಾ ಬೀಜ ಉತ್ಪಾದನೆ, ಸಸ್ಯ ಸಂರಕ್ಷಣೆ, ಹೈನುವ್ಯವಸಾಯ ಕೋಳಿ ಸಾಕಾಣಿಕೆ, ಯಾಂತ್ರಿಕ ಕೃಷಿ, ಕೃಷಿ ಹುಟ್ಟುವಳಿ ಸಂಗ್ರಹಣೆ ಹಾಗೂ ಮಾರಾಟ, ಆರ್ಥಿಕ ಸಹಕಾರ ಇತ್ಯಾದಿ. ಈ ವಿಷಯಗಳ ಜೊತೆಗೆ ಗ್ರಾಮನೈರ್ಮಲ್ಯ ಸಮಾಜ ಜೀವನ ಪ್ರಜಾಪ್ರಭುತ್ವ ತತ್ವ ಹಾಗೂ ಆಡಳಿತ ಮೊದಲಾದ ಸೂಕ್ಷ್ಮ ವಿಷಯಗಳನ್ನು ಸಹ ಸರ್ವೇ ಸಾಮಾನ್ಯವಾಗಿ ಅವರಿಗೆ ತಿಳಿಸಿಕೊಡಬಹುದಾಗಿದೆ.

ಆದರೆ ಈ ಎಲ್ಲಾ ಕಾರ್ಯಕ್ರಮಗಳ ಯಥಾರ್ಥ ಗುರಿ ಈಡೇರಬೇಕಾದ ಮತ್ತು ಪ್ರತ್ಯಕ್ಷ ಕಾರ್ಯಕ್ಷೇತ್ರದಲ್ಲಿ ಫಲಕಾರಿಯಾಗಬೇಕಾದರೆ ತರುಣ ರೈತ ಸಂಘಟನೆಯ ಮೂಲಕ ಮಾತ್ರ ಸಾಧ್ಯ. ತರಬೇತಿ ಪಡೆದ ತರುಣರು ಸ್ವಯಂ ಪ್ರೇರಣೆಯಿಂದ ಶಿಕ್ಷಣಾರ್ಥಿಗಳಾಗಿ ತಮ್ಮ ಶಿಕ್ಷಣದ ಜ್ಞಾನವನ್ನು ತಮಗೂ ತಮ್ಮ ನೆರೆ ಹೊರೆ ರೈತರಿಗೂ ಮುಕ್ತ ಮನಸ್ಸಿನಿಂದ ಸೇವಾಕಾಂಕ್ಷಿಗಳಾಗಿ ಒದಗಿಸಿ ಕೊಡುವ ಸಂಕಲ್ಪದವರಾಗಿರ ಬೇಕಾಗುತ್ತದೆ. ಈ ಸಂಕಲ್ಪದ ತರುಣರನ್ನು ಕಂಡುಹಿಡಿದು ಆಯ್ಕೆ ಮಾಡುವುದು ಸ್ವಯಂಪ್ರೇರಿತ ಸಂಘಗಳಿಂದ ಮಾತ್ರ ಸುಲಭ ಸಾಧ್ಯ. ಏಕೆಂದರೆ ಸಾರ್ವಜನಿಕವಾಗಿ ಸೇವೆ ಮಾಡುವ ಸಂಸ್ಥೆಗಳು ತಮ್ಮ ಸಂಸ್ಥೆಗ ಮೂಲಕ ನೈತಿಕವಾಗಿ ಹೊಣೆಯಾಗಿರಬೇಕಾಗುತ್ತದೆ. ಅದರಂತೆ ಸರಕಾರವೂ ಸಹ ಇಂತಹ ಸ್ವಯಂಪ್ರೇರಿತ ಸಂಘಗಳನ್ನು ಗುರುತಿಸಿ ಮನ್ನಣೆ ಕೊಟ್ಟು ಪ್ರೋತ್ಸಾಹಿಸ ಬೇಕಾಗುತ್ತದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಅಖಿಲಭಾರತ ತರುಣ ರೈತ ಸಮಾಜ ಸ್ಥಾಪನೆಯಾಗಿದ್ದು ಅದರ ರಾಜ್ಯ ಘಟಕಗಳು ಈಗಾಗಲೆ ಕಾರ್ಯಪ್ರವೃತ್ತವಾಗಿವೆ ಇವುಗಳ ಮೂಲಕ ಗ್ರಾಮಾಂತರದ ತರುಣ ರೈತ ಸಮಾಜವನ್ನು ಸ್ಥಾಪಿಸಿಕೊಂಡು ತಮ್ಮ ಪಾತ್ರವನ್ನು ಪ್ರಭಾವಿಯಾಗಿ ತೋರಿಸಿಕೊಡಬೇಕು.

**ಸಾಮೂಹಿಕ ಸೇವಾ ಕಾರ್ಯಗಳು:**

ಸ್ವಯಂಪ್ರೇರಿತ ಖಾಸಗಿ ಸಂಸ್ಥೆಗಳು ಸಮಾಜದಿಂದ ಹಾಗೂ ಸರಕಾರ ದಿಂದ ಮನ್ನಣೆ ಪಡೆಯಬೇಕಾಗಿದ್ದಲ್ಲಿ ತಮ್ಮ ಸಂಸ್ಥೆಯ ಉದ್ದೇಶಗಳನ್ನುಸರಿಸಿ ಶಿಸ್ತಿನಿಂದ ಶ್ರಮ ವಹಿಸಿ, ಯಥಾರ್ಥವಾಗಿ ಕಾರ್ಯ ಮಾಡಿ ತೋರಿಸಬೇಕಾಗುತ್ತದೆ ಹಾಗೆಯೇ ಸಮಾಜದಲ್ಲಿ ಅವಶ್ಯವಿರುವ ಸೇವೆಯನ್ನು, ನೆರವನ್ನು ತಾವೇ ಮುಂದಾಗಿ ಬಂದು ಸ್ವಯಂ ಪ್ರೇರಣೆಯಿಂದ ನಿರ್ವಹಿಸಬೇಕಾಗುತ್ತದೆ. ಅಭಿವೃದ್ಧಿಕಾರ್ಯಗಳಲ್ಲಿ ಇಂತಹ ಸಂಸ್ಥೆಗಳು ಕೊಡುವ ನೆರವು ಮತ್ತು ಕಾಲ ಕಾಲಕ್ಕೆ ಗ್ರಾಮ ಸಮಾಜದ ಆವಶ್ಯಕತೆಯನ್ನು ಅನುಸರಿಸಿ ಕೊಡಮಾಡುವ ಸೇವೆ ಬಹಳ ಅಮೂಲ್ಯವಾದದ್ದು ಈ ದಿಸೆಯಲ್ಲಿ ನಮ್ಮ ತರುಣ ರೈತರು ಸ್ವಯಂ ಪ್ರೇರಣೆಯಿಂದ ಸ್ವಯಂ ಸೇವಕರಾಗಿ

ನಾಡಿನ ಅಭಿವೃದ್ಧಿಗಾಗಿ, ಸಮಾಜದ ಶ್ರೇಯಸ್ಸಿಗಾಗಿ ಸ್ಥಳೀಯ ಪರಿಸ್ಥಿತಿಗನುಗುಣವಾಗಿ ಹಲವಾರು ಸಾಮೂಹಿಕ ಕಾರ್ಯಕ್ರಮಗಳನ್ನು ಕೈಗೊಳ್ಳಬಹುದಾಗಿದೆ. ಅವು ಯಾವುವೆಂದರೆ ಸಾಮೂಹಿಕ ಗಿಡನೆಡುವಕಾರ್ಯಕ್ರಮ, ಸಸ್ಯಸಂರಕ್ಷಣೆ, ಸ್ವಯಂ ಸೇವಕ ತಂಡಗಳನ್ನು ಸಂಘಟಿಸುವ ಮೂಲಕ ರೈತರಿಗೆ ನಾಟಿ ಹಾಕುವ, ಬೀಜಬಿತ್ತುವ, ಒಕ್ಕುವ ಕಾರ್ಯಗಳಲ್ಲಿ ನೆರವಾಗುವುದು, ರೈತರ ಬೆಳೆಗಳನ್ನು ಸ್ವಯಂ ಸೇವಕ ತಂಡಗಳ ಮೂಲಕ ಕಾಯಲು ನೆರವಾಗಿ ಕಳ್ಳಕಾಕರಿಂದ, ಪಶುಪಕ್ಷಿಗಳಿಂದಾಗುವ ನಷ್ಟವನ್ನು ತಡೆಗಟ್ಟುವುದು, ದನಗಳ ಕೊಟ್ಟಿಗೆ ಮತ್ತು ತಿಪ್ಪೆಗುಂಡಿಗಳ ಸುಧಾರಣೆ, ಸಾಮೂಹಿಕ ಕಾಂಪೋಸ್ಟ್ ಮಾಡುವುದು ಇತ್ಯಾದಿ ಕಾರ್ಯಕ್ರಮಗಳಿಂದ ಗ್ರಾಮ ನೈರ್ಮಲ್ಯವನ್ನು ಸುಧಾರಿಸುವುದು, ಸಮಪಾತಳಿ ಒಡ್ಡು ಹಾಕುವ ಕಾಲದಲ್ಲಿ ಸೂಕ್ತ ನೆರವು ನೀಡುವುದು, ದನ, ಕುರಿ, ಕೋಳಿ ಮುಂತಾದ ಪ್ರಾಣಿಗಳ ಪೀಳಿಗೆ ಅಭಿವೃದ್ಧಿಯ ಬಗ್ಗೆ ರೈತರಿಗೆ ತಿಳುವಳಿಕೆ ಇತ್ತು, ಸಂಬಂಧಿಸಿದ ಅಧಿಕಾರಿಗಳ ನೆರವಿನಿಂದ ಪ್ರಾಣಿ ಸಂಪತ್ತು ಸಮೃದ್ಧಿಯಾಗುವಂತೆ ಮಾಡುವುದು, ಗ್ರಾಮದಲ್ಲಿ ಹೈನು ಉದ್ಯಮ, ಕೋಳಿ ಸಾಕಾಣಿಕೆ ಅಭಿವೃದ್ಧಿ ಹೊಂದಲು ಪ್ರೋತ್ಸಾಹ ಕೊಡುವುದು, ಉತ್ಪಾದನೆಯಾಗುವ ವಸ್ತುಗಳನ್ನು ಸಂಗ್ರಹಿಸಿ ಯೋಗ್ಯ ಬೆಲೆಗೆ ಮಾರಾಟವಾಗುವುದಕ್ಕೆ ನೆರವಾಗುವುದು; ಗ್ರಾಮದಲ್ಲಿ ನಡೆಯುವ ಎಲ್ಲಾ ಸಾಮಾಜಿಕ ಚಟುವಟಿಕೆಗಳಲ್ಲಿ ಅಂದರೆ ರೋಗ–ರುಜನಗಳ ಪ್ರತಿಬಂಧಕ ಕಾರ್ಯ, ಮಿತಸಂತಾನ ಯೋಜನೆ, ಜಾತ್ರೆ ಮುಂತಾದವುಗಳಲ್ಲಿ ಸ್ವಯಂಸೇವಕರಾಗಿ ಕಾರ್ಯ ನಿರ್ವಹಿಸುವುದು ಇತ್ಯಾದಿ.

ಭಾರತದಲ್ಲಿ ಕಳೆದೊಂದು ದಶಕದಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ಗ್ರಾಮ ಪುನರ್ನಿರ್ಮಾಣ ಯೋಜನೆಗಳು ವಿಶಿಷ್ಟಪ್ರಾಮುಖ್ಯ ಪಡೆದುಕೊಂಡಿವೆ. ಗ್ರಾಮೀಣ ಪ್ರದೇಶಗಳಲ್ಲಿ ವಾಣಿಜ್ಯಬ್ಯಾಂಕುಗಳ ಪ್ರವೇಶದ ಜೊತೆಗೇ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ, ಗ್ರಾಮೀಣ ನೀರು ಮತ್ತು ವಿದ್ಯುತ್ ಪೂರೈಕೆ ಯೋಜನೆಗಳು ಡಿ. ಆರ್. ಪಿ. ಸಾಲಗಳು, ನಿರುದ್ಯೋಗಿ ಯುವಕರ ತರಬೇತಿ ಮತ್ತು ಉದ್ಯೋಗ ಯೋಜನೆಗಳು, ಕೃಷಿ ಮತ್ತು ಪ್ರೋತ್ಸಾಹ, ಹಿಂದುಳಿದ ವರ್ಗಗಳ ಚೈತನ್ಯ ಯೋಜನೆ, ಅಂತ್ಯೋದಯ, ವಿಶೇಷ ಘಟಕ ಯೋಜನೆ ಮುಂತಾದ ಹಲವು ಹತ್ತು ಕಾರ್ಯಕ್ರಮಗಳು ಇಂದು ಜಾರಿಗೆ ಬಂದಿವೆ. ಗ್ರಾಮಾಭಿವೃದ್ಧಿ ಕಾರ್ಯಕ್ರಮಗಳನ್ನು ಕೇಂದ್ರ ಸರಕಾರ, ರಾಜ್ಯಸರಕಾರ ಗಳು ಅವಿಚ್ಛಿನ್ನವಾಗಿ ನಡೆಸುತ್ತಿವೆ. ಗೃಹಕೈಗಾರಿಕೆ, ಕುರಿ ಸಾಕಣೆ, ಕೋಳಿ ಸಾಕಣೆ ಇತ್ಯಾದಿಗಳಿಗೆ ಹಣದ ಹೊಳೆ ಹರಿಯುತ್ತಿದೆ; ಆದರೆ ಎಲ್ಲಾ ಸರಕಾರಿ ಅಭಿವೃದ್ಧಿ ಯತ್ನಗಳಿಗೆ ನಿರ್ಣಯಾತ್ಮಕ ಗೆಲುವು ಲಭಿಸಬೇಕಾದರೆ ಹಳ್ಳಿಗಳ ಸಮಸ್ಯೆಗಳನ್ನು ಅರ್ಥೈಸಿ ಕಡಿಮೆ ಮಾಡಬಲ್ಲ ಸತ್ವಶಾಲಿ ತರುಣ ರೈತರ ಸಕ್ರಿಯ ಪಾತ್ರ ತೀರಾ ಅಗತ್ಯ.

# ಕನಸಿನ ಕನ್ಯೆ ವೈಜ್ಞಾನಿಕ ಕಿರುಧಾರಾವಾಹಿ-10.

ಶ್ರೀ ಪ. ರಾಮಕೃಷ್ಣಶಾಸ್ತ್ರಿ, "ಶಿವಶಕ್ತಿ ನಿಲಯ," ಮಜ್ಜಿನ, ದಕ್ಷಿಣ ಕನ್ನಡ ಜಿಲ್ಲೆ.

ಪಂಡಿತ ರಾಣಿಯ ಆಜ್ಞೆ ಕೇಳಿ ಇಳಿದು ಹೋದ. ಅಂಥ ಸುಂದರ ಹೂವನ್ನು ನಾಶಮಾಡಬೇಕೇ? ಅವಳನ್ನು ಜಗತ್ತಿನಲ್ಲಿ ಮಾನವಳಾಗಿ ಬಾಳದಂತೆಯೇ ಮಾಡಬೇಕೇ? ಕಾತ್ಯಾಯನಿ ಎಷ್ಟುಕ್ರೂರಳಾದರೂ ಅವಳನ್ನು ಅವನು ಪೋಷಿಸಿದ್ದಾನೆ. ಕಾತ್ಯಾಯನೀ ಎಂದು ಪ್ರೀತಿಯಿಂದ ಕರೆದಾಗ ಓಡೋಡಿ ಬರುತ್ತಾಳಾಕೆ. ತನ್ನ ಹತ್ತಿರ ಕುಳಿತು ತಾನೀಯುವ ಔಷಧವನ್ನು ಪ್ರೀತಿಯಿಂದ ಕುಡಿಯುತ್ತಾಳೆ. ಹಾಗೆಯೆ ನಕ್ಕು ಹೊರಟು ಹೋಗುತ್ತಾಳೆ, ಅವಳೂ ಮನುಷ್ಯಳು. ಹಲವು ಹಂಬಲವಿದ್ದರೂ ಅವೆಲ್ಲವನ್ನೂ ತಡೆದು ಕ್ರೂರತೆಯೊಂದನ್ನೆ ತನ್ನ ಔಷಧ ಅವಳ ಮೆದುಳಲ್ಲಿ ಸೃಷ್ಟಿಸುತ್ತ ಇನ್ನೂ ಅದೇ ಔಷಧ ಆ ಸುಂದರತೆಯನ್ನು ನಾಶಮಾಡಿ ವಿಕಾರ ರೂಪಿಯನ್ನಾಗಿ ಮಾಡುತ್ತದೆ. ಅದನ್ನೂ ಈ ಕಣ್ಣುಗಳು ನೋಡಬೇಕೇ? ರಾಣಿಗೆ ಏಕೆ ಇಂಥಹುಚ್ಚು ಹಿಡಿಯಿತು?

ಆದರೂ ಪಂಡಿತನಿಗೆ ಆ ಕೊನೆಯ ಔಷಧ ಕೊಡಲು ಮನಸ್ಸು ಬರಲಿಲ್ಲ ಅದನ್ನು ತಯಾರಿಸಿ ಇನ್ನೂ ಭದ್ರವಾಗಿ ಇಟ್ಟಿದ್ದಾನೆ. ಅದಕ್ಕೆ ಮೊದಲೇ ಕಾತ್ಯಾಯ ನಿಯನ್ನೊಮ್ಮೆ ಹೃದಯವಿರುವ ಮಾನವಿಯಾಗಿ ಕಾಣುವ ಹಂಬಲ ಅವನಿಗಿದೆ ಅದಕ್ಕಾಗಿಯೇ ನೂತನ ಔಷಧವೊಂದನ್ನು ಆತ ತಯಾರಿಸಿದ್ದಾನೆ. ಅವಳೊಡನೆ ಒಂದೆರಡು ದಿನ ಕಳೆದು ಅವಳನ್ನು ಮಾನವಿಯಾಗಿ ಕಾಣಲು ಅದನ್ನು ಪ್ರಯೋಗಿಸಿ ಆ ಮೇಲೆ ದಾನವಿಯನ್ನಾಗಿ ಮಾಡುತ್ತಾನೆ. ಅದೇ ಯೋಚನೆ ಅವನ ಮೆದುಳಲ್ಲಿ ದೃಢವಾಯಿತು. ಕಾತ್ಯಾಯನಿಯನ್ನು ಮಾನವಿಯಾಗಿ ಕಾಣುವ ಆತುರವೂ ಹೆಚ್ಚಾಯಿ

ಮಾನವನನ್ನು ದಾನವನನ್ನಾಗಿ ಮಾಡುವ ಔಷಧವನ್ನು ಎದುರು ತೆಗೆದಿಟ್ಟ ದಾನವನನ್ನು ಮಾನವನನ್ನಾಗಿ ಮಾಡಲು ಔಷಧವನ್ನು ತಯಾರಿಸಿ ತನ್ನ ಕೋಣೆ ಯೊಳಗಿಟ್ಟ. ಹಾಗೆಯೇ ಅಂಥ ಭೀಷಣ ದ್ರಾವಕವನ್ನು ತನ್ನ ಕೈಯಾರೆ ಕೊಡುವ ಮನಸ್ಸಿಲ್ಲದೆ ಪಂಡಿತ ಕಾತ್ಯಾಯನಿಯನ್ನು ಕರೆದು, "ಕಾತ್ಯಾಯನಿ, ಇಂದು ಸಂಜೆ ನಿನಗೆ ನನ್ನ ಕೋಣೆಯಲ್ಲೆ ಔಷಧ ಕೊಡುತ್ತೇನೆ, ಅಲ್ಲಿಗೆ ಬಾ. ಅದು ಮುಗಿದೊಡನೆಯೆ ಎರಡು ದಿನ ಕಳೆದ ಮೇಲೆ ನೀನು ಕುಡಿಯುವ ದ್ರಾವಕವನ್ನು ಔಷಧಿಯ ಕೋಣೆಯ ಎದುರಾಗಿ ಇಟ್ಟಿದ್ದೇನೆ. ಅದರಿಂದ ಶರೀರ ಪುಷ್ಟಿಯಾಗಿ ಮನಸ್ಸು ಸ್ವಚ್ಛವಾಗಿ ಯಾರನ್ನು ಎದುರಿಸುವ ಶಕ್ತಿಯೂ ಸಹನೆಯೂ ಬರುತ್ತದೆ. ಬಳಿಕ ನೀನು ಎಂದೆಂದೂ ಔಷಧ ಕುಡಿಯಬೇಡ. ಅದೇ ಕೊನೆಯದು" ಎಂದು ಹೇಳಿದ. ಆ ಮಾತನ್ನು ಹೇಳುವಾಗ ಅವನ ಹೃದಯದಲ್ಲಿ ವೇದನೆಯಾಗುತ್ತಿತ್ತು. ಅದನ್ನು ಕಷ್ಟದಿಂದ ತಡೆದುಕೊಂಡು ಆತ ಹೇಳುತ್ತಿದ್ದ.

"ಕಾತ್ಯಾಯಿನಿ" ಆಗಲಿ ಎಂದಳು. ಪಂಡಿತ ತನ್ನ ಕೊಠಡಿಗೆ ಬಂದು ಮುಖವಾಡವನ್ನು ಒಂದು ಬದಿಗಿರಿಸಿ ಕಾತ್ಯಾಯಿನಿಯನ್ನು ನಿಜವಾದ ಮಾನವಿಯಾಗಿ ಮಾಡುವ ದ್ರಾವಕವನ್ನು ಎದುರಿಗಿಟ್ಟು ಕುಳಿತ. ಅವನ ಮನದಲ್ಲಿ ಇನ್ನೆರಡು ದಿನ ಆ ಮುಖವಾಡದ ಅವಶ್ಯಕತೆಯೊಂದೂ ಕಾಣಲಿಲ್ಲ. ಎರಡು ದಿನ ಕಳೆದ ಮೇಲೆ ಮುಖವಾಡ ಹಾಕಿ ನಿಂತರೂ ಅವಳಿಂದ ಮರಣ ಸಿದ್ಧ. ಅದಕ್ಕಾಗಿಯೇ ಓಡಿ ಹೋಗಬೇಕೆಂದು ಆತ ನಿರ್ಧರಿಸಿ ಕಾತ್ಯಾಯಿನಿಯ ದಾರಿ ಕಾದ.

ಕಾತ್ಯಾಯಿನಿ ಬಂದಳು. ಆಕೆ ಕೋಣೆಯ ಸುತ್ತಲೂ ನೋಡಿದಳು. ಆದರೆ ನರಿ ಮೊಗದ ಪಂಡಿತ ಅಲ್ಲಿ ಕಾಣಲಿಲ್ಲ. ಯಾರೊ ಒಬ್ಬ ಪಂಡಿತನ ಮಂಚದ ಮೇಲೆ ಕುಳಿತಿದ್ದ. ಅದನ್ನು ಕಂಡು ಅವಳ ಕಣ್ಣುಗಳು ಕಿಡಿಗಳನ್ನು ಹಾರಿಸಿದವು. ಅವಳಲ್ಲಾದ ಬದಲಾವಣೆಗಳನ್ನು ಕಂಡು ಪಂಡಿತ ಮೃದುವಾಗಿ ನಕ್ಕು "ಗಾಬರಿ ಏಕಾದೆ? ನಾನೇ ನಿನ್ನ ಪಂಡಿತ ಎಂದ. ಅವಳ ಕಣ್ಣುಗಳು ನಂಬಲಿಲ್ಲ. ಅವನನ್ನು ಕ್ರೂರವಾಗಿ ನೋಡಿ ಹಲ್ಲು ಕಡಿದಳು. ಆಗ ಪಂಡಿತ ಬೆದರಿದ. ತಾನು ಮಿಂಚಿ ಮಾಡಿದ ಕಾರ್ಯ ಬಹುಶಃ ಅಕ್ಷಮ್ಯವಾಯಿತು ಎಂದು ನೆನೆದುಕೊಂಡ.

ಅವನ ಎಣಿಕೆ ಸರಿಯಾಗಿಯೇ ಇತ್ತು. ಕಾತ್ಯಾಯಿನಿ ಪಂಡಿತನ ಮೈ ಮೇಲೆ ಹಾರಿ ಅವನನ್ನು ಅತ್ತ ಕೊಡವಿ ಎಸೆದಿದ್ದಳು. ಪಂಡಿತ ಚೀರಿದರೂ ವ್ಯರ್ಥವಾಗಿತ್ತು. ಇನ್ನೊಂದು ಹಾರಿಕೆಯಲ್ಲಿ ಅವನ ಪಕ್ಷಿಯೂ ಹಾರಿಹೋಗಿತ್ತು. ಆ ಹೆಣಕ್ಕೆ ಚೆನ್ನಾಗಿ ಒದ್ದು ಕಾತ್ಯಾಯಿನಿ ಕಟವಾಯಿಯನ್ನು ಒರೆಸಿಕೊಂಡಳು. ಕೈಗೆ ಒಂದಿಷ್ಟು ರಕ್ತ ಹತ್ತಿದುದನ್ನು ನೆಕ್ಕಿದಳು. ಎದುರೇ ಕಾಣುತ್ತಿರುವ ದ್ರಾವಕ ಪಾತ್ರೆಯನ್ನು ನೋಡಿ, ಅದನ್ನು ಗಟಗಟನೆ ಕುಡಿದು ವೇಗವಾಗಿ ತನ್ನ ಮಂಚದಮೇಲೆ ಮಲಗಿದಳು.

ಎಷ್ಟೊ ಹೊತ್ತಿನ ಅನಂತರ ಆಕೆಗೆ ಎಚ್ಚರವಾಯಿತು. ಏನೋ ತನ್ನಲ್ಲಿ ಬದಲಾವಣೆ ಯಾಗಿದೆ. ಆಗುತ್ತಲೇ ಇದೆ ಎಂಬುದನ್ನು ಕಂಡುಕೊಂಡಳು. ಇದ್ದಕ್ಕಿದಂತಯೇ ಅವಳಿಗೆ ಎಲ್ಲರ ಮೇಲೆ ಪ್ರೀತಿ ಬರತೊಡಗಿತು. ತನ್ನ ಕೋಣೆ, ಮಂಚ, ಹೂಗಿಡ, ಎಲ್ಲದರ ಮೇಲೂ ಯಾವುದೊ ಒಂದು ತರದ ಪ್ರೀತಿ ಉಂಟಾಗ ಹತ್ತಿತು. ತನ್ನನೇ ಆಕೆ ಪ್ರೀತಿಸತೊಡಗಿದಳು. ತನ್ನ ದುಂಡು ಕೈಯನ್ನು ನೋಡಿ ತಾನೆಷ್ಟು ಸುಂದರಿ ಎಂದು ತೋರಿತವಳಿಗೆ. ಯಾವುದೋ ಆನಂದದ ಲಹರಿಯೊಂದು ಅವಳ ಮನದಂತ ರಾಳದಲ್ಲಿ ಏಳುತ್ತಿತ್ತು. ಬೀಸುವ ಗಾಳಿಯೂ ಹರಿವ ನೀರೂ ಹೊಸತೊಂದು ಜಗತ್ತಿದು ಎಂದು ಹೇಳಿದಂತೆ ತೋರುತ್ತಿತ್ತು. ಅವಳ ಮನಸ್ಸು ಉಲ್ಲಸಿತವಾಯಿತು. ಬಾಯಿಂದ ಏಕೊ ರಾಗವೊಂದು ಹೊರಟಿತು. ಆಗ ಮನಸ್ಸು ಏನನ್ನೊ ಅಪೇಕ್ಷಿಸಿತು. ಏನೆಂದೇ ತಿಳಿಯದ ಆ ಹೊಸ ಲಹರಿ ಅದೊಂದು.

ಇಂಥ ಹೊಸ ಭಾವನೆಯಿಂದ ಅವಳ ದೇಹ ಪುಳಿಕಗೊಂಡಿತು. ಆಕೆ ಓಡುತ್ತ ಅಲ್ಲಿಂದ ಹೊರಟಳು. "ಶಿಕ್ಷಕರೇ" ಎಂದು ಕರೆದಳು. "ಪಂಡಿತರೆ" ಎಂದು ಕೂಗಿದಳು. ಯಾರ ಉತ್ತರವೂ ಬಾರದಾದಾಗ ಶಿಕ್ಷಕನ ಕೋಣೆಯತ್ತ ನಡೆದಳು.

## ಅಧ್ಯಾಯ-12

ಕಂಡ ಆ ಭೀಕರ ದೃಶ್ಯವನ್ನು ಮೆಲುಕು ಹಾಕುತ್ತ ಶಿಕ್ಷಕ ಪಲ್ಲಂಗದ ಮೇಲೆ ಅಂಗಾತವಾಗಿ ಮಲಗಿದ್ದ. ಸಿಂಹಿಣಿಯಾದ ಕಾತ್ಯಾಯಿನಿ ಪಂಡಿತನ ಮೇಲೆರಗಿ ಹಲ್ಲಿನಿಂದ ಕಚ್ಚಿ ಬಿಸುಟಿದ ಆ ರುದ್ರ ದೃಶ್ಯವನ್ನು ನೆನೆಸುವಾಗಲೇ ಅವನ ರಕ್ತ ಹೆಪ್ಪುಗಟ್ಟಿದಂತಾಗುವುದು. ಅವನು ಇನ್ನುಮುಂದೆ ಅಲ್ಲಿರುವುದೇ ಪ್ರಾಣಾಪಾಯವೆಂದು ಎಣಿಸಿದರೆ ಆದರೆ ಈ ತನಕ ಕಾತ್ಯಾಯಿನಿಯ ಸುಂದರತೆ ಅವನ್ನಿಲ್ಲಿ ಕಟ್ಟಿ ಹಾಕಿತ್ತು. ಆಕೆ ಎಷ್ಟು ಕ್ರೂರಳಾದರೂ ಶಿಕ್ಷಕ ಹೇಳಿದ ಮಾತನ್ನೆಂದೂ ಮೀರುತ್ತಿರಲಿಲ್ಲ. ಈಗ ಅವಳ ಮುಂದೆ ಹೋಗಲು ಅವನಿಗೇ ಧೈರ್ಯ ಬರುತ್ತಿರಲಿಲ್ಲ. ಆ ಪಂಡಿತನ ಇಂದಿನ ಕಗ್ಗೊಲೆಯನ್ನು ಕಂಡು ಆತ ಶೀರ ಇಳಿದು ಹೋಗಿದ್ದ. ಅವನು ದೃಶ್ಯಾಂತವಾದ ಮೇಲೆ ಕೋಣೆಗೆ ಹೋಗಿ ಚಾಕರರಿಂದ ಆ ಹೆಣಕ್ಕಾಗುವ ಅಂತಿಮ ಸಂಸ್ಕಾರವನ್ನು, ನೆರವೇರಿಸಿ "ಈ ಅರಮನೆ ಕಟ್ಟುವಾಗಲೇ ರಕ್ತದ ಪಂಚಾಂಗ ಹಾಕಿರಬೇಕು ಎಷ್ಟು ರಕ್ತವನ್ನು ಈ ನೆಲ ಕುಡಿದೀತೋ" ಎಂದು ದುಃಖದಿಂದಾದ ಆದೇ ಆಯಾಸದಿಂದ ಬಂದು ಮಂಚದ ಮೇಲೆ ಬಿದ್ದಿದ್ದ; ತನ್ನ ಮುಖವಾಡವನ್ನು ಒಂದು ಕಡೆ ಎಸೆದಿದ್ದ.

ಹಾಗೆಯೇ ಅವನು ಎಚ್ಚರ, ನಿದ್ರೆ ಇದರಲ್ಲಿ ಮುಳುಗಿ ತೇಲುತ್ತಿರಲು ಕಾತ್ಯಾಯನಿ ಅವನನ್ನೆ ಕರೆಯುತ್ತ ಕೋಣೆಯೊಳಗೆ ಧುತ್ತೆಂದು ಪ್ರವೇಶಿಸಿದಳು. ಶಿಕ್ಷಕ ಅವಳನ್ನು ಕಂಡು ಬೆಚ್ಚಿದ. ಇದು ಕನಸೇ ಎಂದು ನೆನೆಸಿದ. ಅಲ್ಲ, ವಾಸ್ತವವಾಗಿತ್ತು. ತನ್ನ ನೂರು ವರುಷವೂ ತುಂಬಿ ಬಂತು ಎಂದು ಅವನಿಗೀಗ ತೋರಿತು. ತನ್ನ ಮುಖವಾಡವನ್ನು ಹಾಕಿಕೊಳ್ಳಲೂ ಅವನಿಗೆ ಸಮಯವಿರಲಿಲ್ಲ. ಅವನು ಕರ್ತವ್ಯಮೂಢನಾಗಿ ಬೆದರಿ ನಿಂತ.

ಸುಂದರ ತರುಣನನ್ನು ಕಂಡು ಕಾತ್ಯಾಯನಿಗೆ ಏಕೊ ಹೊಸಭಾವನೆಯೊಂದು ಬಂದು ನಾಚುಗೆಯಾಯಿತು. ಇದೇನು ಹೊಸತನ ಎಂದಾಕೆಗೆ ತಿಳಿಯಲಿಲ್ಲ. ಆಕೆ ನಾಚುತ್ತ ಕೇಳಿದಳು, "ಶಿಕ್ಷಕರು ಎಲ್ಲಿ ಹೋದರು"?

ಕಾತ್ಯಾಯನಿಯ ಆ ವಿನಯದ ಮಾತಿನಿಂದ ಶಿಕ್ಷಕ ದಂಗಾದ. ಆಕೆ ಹೀಗೇಕೆ ಆದಳು ಎಂದವನಿಗೆ ಒಂದು ಕ್ಷಣ ನಂಬಲಿಕ್ಕೂ ಅಸದಳವೆಂದು ತೋರಿತು. ಅವನು ಹೇಳಿದ, "ನಾನೇ ಆ ಶಿಕ್ಷಕ"

"ನೀವೆ!" ಆಶ್ಚರ್ಯದಿಂದ ಕೇಳಿದಳು ಕಾತ್ಯಾಯನಿ. "ಹೌದು. ನಾನೇ ಆ ಶಿಕ್ಷಕ. ನಿನ್ನೆದುರು ಸುಳಿದಾಡುವ ಆ ವಿಕೃತ ರೂಪ ನೋಡು, ಅಲ್ಲೇ ಇದೆ" ಅವನು ಬೆರಳು ತೋರಿಸಿದ.

ಕಾತ್ಯಾಯನಿ ಅತ್ತ ನೋಡಿದಳು. ನರಿಯ ಮೊಗ ಎತ್ತರದಲ್ಲಿ ಜೋತಾಡುತ್ತಿತ್ತು. ಚರ್ಮದ ಅಂಗಿ ನಿಸ್ಸಹಾಯವಾಗಿ ಬಿದ್ದಿತ್ತು. ಕಾತ್ಯಾಯನಿ ಕರುಣಾಪೂರ್ಣ ಕಂಠದಿಂದ ನುಡಿದಳು, "ಶಿಕ್ಷಕರೇ, ಇವೆಲ್ಲ ನಾಟಕವೇಕೆ ನನ್ನ ಮುಂದೆ,? ಆ ಪಂಡಿತರು ಎಲ್ಲಿ ಹೋದರು, ಅವರೂ ನಿಮ್ಮಂತೆಯೇ ಇರುತ್ತಾರಲ್ಲ"?

ಹೇಳಲೋ ಬೇಡವೊ ಎಂದುಕ್ಷಣ ಹೊತ್ತು ಚಿಂತಿಸಿದ ಆ ಶಿಕ್ಷಕ. ಕೊನೆಗೆ ಹೇಳಿಯೇ ಬಿಡುವುದೆಂದು ನಿರ್ಧರಿಸಿ, "ಅವರೂ ನನ್ನ ಹಾಗೆ, ನಿನ್ನ ಹಾಗೆಯೇ ಇದ್ದಾರೆ. ಆದರೆ ಅವರನ್ನು ನೀನು ತಪ್ಪಿಕೊಂದುಬಿಟ್ಟೆ. ಕ್ಷಣ ಹಿಂದೆ ಅವರ ಮರಣ ನಿನ್ನ ಕೈಯಿಂದಲೇ ಆಯಿತು. ಅವರದೆಂದಲ್ಲ, ಇನ್ನೆಷ್ಟೋ ನಿಷ್ಪಾಪಿಗಳ ಕೊಲೆ ನಿನ್ನ ಕೈಯಿಂದಾಗಿದೆ" ಎಂದು ಶಿಕ್ಷಕ ಹೇಳಿದ.

"ಅಂ?" ಕಾತ್ಯಾಯನಿ ಅಚ್ಚರಿಯಿಂದ ನೋಡಿದಳು. "ನಾನು ಪಂಡಿತರನ್ನು ಕೊಂದೆನೆ? ಇದೇ ಕೈಗಳಿಂದ ಕೊಂದೆನೆ? ಛೇ, ಎಂಥ ಅನ್ಯಾಯ. ನಾನು ಏಕೆ ಅಷ್ಟು ನಿಷ್ಪಾಪಿಗಳನ್ನು ಕೊಂದೆ, ಅದನ್ನಾದರೂ ಹೇಳರಲ್ಲ"? ಎನ್ನುತ್ತ ತನ್ನ ಕೋಮಲ ಹಸ್ತಗಳನ್ನು ನೋಡಿಕೊಂಡು ಅವಳು ಕಣ್ಣೀರ್ಗರೆದಳು.

ಶಿಕ್ಷಕನಿಗೆ ಅತ್ಯಾಶ್ಚರ್ಯವಾಯಿತು. ಪಂಡಿತರು ಸತ್ತೊಡನೆಯೇ ಅವರೊಂದಿಗೆ ಆ ಔಷಧ ಪ್ರಭಾವವೂ ಹೊರಟು ಹೋಯಿತೇ ಎಂದು ಶಿಕ್ಷಕ ಎಣಿಸಿಕೊಂಡ. ಆತ ಹೇಳಿದ, "ಏಕೋ ಗೊತ್ತಿಲ್ಲ ಕಾತ್ಯಾಯನಿ. ನಿನ್ನಿಂದ ಇಂಥ ಕೊಲೆಗಳೇ ನಡೆಯಬೇಕೆಂದು ರಾಣಿಯ ಸಂಕಲ್ಪ. ಇಂಥದಲ್ಲ, ಇದಕ್ಕಿಂತಲೂ ಭೀಕರವಾದ ಕೊಲೆಗಳನ್ನು ನೀನು ಮಾಡಲಿಕ್ಕಿದೆ, ಆದಕ್ಕಾಗಿ ನಿನಗೆ ಈ ಬಗೆಯ ಶಿಕ್ಷಣ ಕೊಡಲಾಗುತ್ತಿದೆ................

ಕಾತ್ಯಾಯನಿ ಅಪ್ರತಿಭಳಾಗಿ ನಿಂತಳು. ಅವಳ ಕಣ್ಣುಗಳಿಂದ ಧಾರೆಧಾರೆಯಾಗಿ ಅಶ್ರುಜಲ ಪ್ರವಹಿಸಿತು. ಆಕೆ ಶಿಕ್ಷಕನನ್ನು ನೋಡಿ, "ಈಗಾದುದು ಕಳೆಯಿತಲ್ಲ. ಇನ್ನು ಮುಂದಾಗುವುದನ್ನಾದರೂ ನನ್ನಿಂದ ತಪ್ಪಿಸಲು ಸಾಧ್ಯವಿಲ್ಲವೇ ಶಿಕ್ಷಕರೇ? ಎಂದು ದೀನವಾಣಿಯಿಂದ ಕೇಳಿದಳು.

"ಅದರ ನಿರ್ಣಯ ನನ್ನದಲ್ಲ. ಪಂಡಿತರು ಹೇಳುತ್ತಿದ್ದರು. ಅವರನ್ನು ನೀನೆ ಕೊಂದುಬಿಟ್ಟೆ. ಈಗ ಯಾರೊಡನೆ ಹೇಳಲಿ?" ಅಸಹಾಯುವಾಗಿ ಹೇಳಿದ ಶಿಕ್ಷಕ. "ಥೂ ನನ್ನನ್ನು ಸಾಕಿದ ಅವರನ್ನು ನಾನೇಕೆಕೊಂದೆ? ಅಯ್ಯೋ ಪಂಡಿತರನ್ನು ಯಾಕಾದರೂ ಕೊಂದೆ? ಅಯ್ಯೋ........ ಇದರಿಂದ ನನ್ನ ಬಿಡುಗಡೆಯಾಗದೇ ಶಿಕ್ಷಕರೇ"? ಎ ಕೇಳಿದಳು. ಬಿಡುಗಡೆ! ಅದು ವ್ಯರ್ಥಶ್ರಮ. ರಾಣಿ ಆಜ್ಞೆಯ ಮುಂದೆ ನಾವು ತಲೆ ಬಾಗಬೇಕಲ್ಲ! ಅವಳ ಸಂಕಲ್ಪ ಏನಿದೆಯೋ ಅದಾರಿಗೆ ಗೊತ್ತು! ಎಂದ ಶಿಕ್ಷಕ.

"ಉಹುಂ, ಹಾಗಾಗಬಾರದು. ಈ ಸೆರೆಯಿಂದ ನನ್ನನ್ನು ನೀವೇ ಬಿಡುಗಡೆ ಮಾಡಬೇಕು. ಇಲ್ಲಿ ನನಗಿಲ್ಲಿ ಉಸಿರುಗಟ್ಟುತ್ತಿದೆ! ಎಂಥ ಅನ್ಯಾಯ, ಇದೇ ಕೈಗಳೂ ಪಂಡಿತರನ್ನು................

"ಅದು ಆಗದು ಕಾತ್ಯಾಯನಿ, ಈ ಸಂಗತಿತಿಳಿದರೆ ರಾಣಿ ನಮ್ಮಿಬ್ಬರ ತಲೆ ತೆಗೆಸಿಯಾಳು"

"ಇಲ್ಲದಿದ್ದರೂ ಅದೇ ಗತಿ, ಶಿಕ್ಷಕರೇ. ನನ್ನಿಂದಾಗಿ ಇನ್ನು ಮುಂದೆ ಸಾಯಲಿರುವ ಜೀವಗಳಾದರೂ ನನ್ನ ಕೊಲೆಯಿಂದ ಉಳಿದಾವು" ಕಾತ್ಯಾಯನಿ ಗದ್ಗದ ಕಂಠಳಾದಳು ಶಿಕ್ಷಕನಿಗೆ ತಾನೇನು ಮಾಡಬೇಕೆಂದೂ ತಿಳಿಯಲಿಲ್ಲ. ಬದಲಾದ ಅವಳನ್ನು ನೋಡಿ ಅವಳ ಹೆಣ್ತನವನ್ನು ಕಂಡು ಆತ ಆಶ್ಚರ್ಯದಿಂದ ಮೂಢನಾಗಿದ್ದ.

" ಮಾತಾಡಿ ಶಿಕ್ಷಕರೇ. ನನ್ನನ್ನು ಈ ಸೆರೆಯಿಂದ ಬಿಡಿಸಿರಿ. ಎಲ್ಲಾದರೂ ಕರಕೊಂಡು ಹೋಗಿಬಿಡಿ ಎಂದು ದುಂಬಾಲು ಬಿದ್ದಳು ಕಾತ್ಯಾಯನಿ. ಅವಳ ಬೇಡಿಕೆ ಯನ್ನು ತಿರಸ್ಕರಿಸುವುದು ಅವನಿಂದಾಗಲಿಲ್ಲ. ಅವನು, ನಾಳೆ ರಾತ್ರಿ ನಿನ್ನನ್ನು ಬಿಡುಗಡೆ ಮಾಡೋಣ" ಎಂದ. ಹಾಗೆಯೇ ಅವಳನ್ನು ಹತ್ತಿರಕುಳ್ಳಿರಿಸಿ, ಹಿಂದಾದ ಒಂದೊಂದೇ ಸುದ್ದಿಗಳನ್ನು ಹೇಳತೊಡಗಿದ. ಆದನ್ನು ಕೇಳಕೇಳುತ್ತ ಆಕೆ ಬಿಕ್ಕಿ ಬಿಕ್ಕಿ ಅತ್ತಳು. ರಾಣಿಗೆ ಇಷ್ಟೇಕೆ ರಕ್ತದಾಹ ಎಂದಾಕೆ ತಿಳಿಯದೆ ವ್ಯಥೆಗೊಂಡಳು. "ಅಬ್ಬ! ಇನ್ನೆಷ್ಟು ಕೊಲೆಗಳು ನನ್ನಿಂದ ಜರಗಬೇಕಿತ್ತೋ" ಎಂದು ನಿಟ್ಟುಸಿರ್ಗರೆದಳು. ಇನ್ನು ಸಾಮೂಹಿಕ ಕಗ್ಗೊಲೆ ನಡೆಯಲಿಕ್ಕಿದೆ. ಅವಕ್ಕಾಗಿ ಅರಮನೆಯಲ್ಲಿ ತಯಾರಿ ನಡೆಯುತ್ತಿದೆ. ಆದರಿಂದ ನಿನ್ನ ಮಹತಿ ಹೆಚ್ಚಲಿದೆ ಎಂದ ಶಿಕ್ಷಕ.

ಹಾಗೆಯೇ ಅವರು ಬಹುಹೊತ್ತು ಮಾತನಾಡುತ್ತ ಕುಳಿತಾಗ ಬೆಳಗಿನ ಕೋಳಿ ಕೂಗಿ ಅವರನ್ನು ಎಚ್ಚರಿಸಿತ್ತು. ತನ್ನ ಬಿಡುಗಡೆಯ ಮಂಗಳ ಪ್ರಭಾತವನ್ನು ಹಾರೈಸುತ್ತ ಕಾತ್ಯಾಯನಿ ಶಯ್ಯಾಗಾರದತ್ತ ನಡೆದಳು.

## ಪರಮ ಪೂಜ್ಯ ಶ್ರೀ ಶ್ರೀಗಳವರ ನವೆಂಬರ್ ತಿಂಗಳ ಕಾರ್ಯಕ್ರಮ.

1-11-90 ತುಮಕೂರು ಕುಂಬಾರ ಸಮಾಜ ಹಾಸ್ಟಲ್ ಕಟ್ಟಡದ ಶಂಕುಸ್ಥಾಪನೆ. ತುಮಕೂರು ಸಿದ್ಧಗಂಗಾ ಕಾಲೇಜಿನಲ್ಲಿ ಕನ್ನಡ ರಾಜ್ಯೋತ್ಸವ

2-11-90 ಬೆಂಗಳೂರು ಕುಮಾರಪಾರ್ಕ ಶ್ರೀ ಹೆಚ್. ಎನ್. ದಯಾನಂದ್‌ನವರ ಮನೆಯಲ್ಲಿ ಪೂಜೆ.

3-11-90 ತುಮಕೂರು ಬಾಲಭವನದಲ್ಲಿ ಭಾರತ ಸೇವಾದಳದ ಸಭೆಯಲ್ಲಿ.

4-11-90 ತುಮಕೂರು ಸಿದ್ಧಗಂಗಾ ಬಡಾವಣೆ, ಶ್ರೀ ಟಿ.ಎಸ್. ಸಿದ್ಧಗಂಗಯ್ಯನವರ ಮನೆಯಲ್ಲಿ ಪೂಜೆ.

5-11-90 ತುಮಕೂರು ಸಿ.ಎಸ್. ಸಿದ್ಧಲಿಂಗಯ್ಯನವರ ಮನೆಯಲ್ಲಿ ಪೂಜೆ.

6-11-90 ಶ್ರೀಮಠದಲ್ಲಿ ಜಿಲ್ಲಾ ಯುವಜನ ಸೇವಾ-ಕ್ರೀಡಾ ಕೂಟದ ಉದ್ಘಾಟನೆ.

7-11-90 ಬೆಳಗ್ಗೆ ಬೆಂ. ಜಿಲ್ಲೆ. ದೇವನಹಳ್ಳಿ B. K. ಬಸಪ್ಪನವರ ಮನೆಯಲ್ಲಿ ಪೂಜೆ ಸಂಜೆ ಬೆಂಗಳೂರು ವಿಜಯನಗರ ಶಿವಣ್ಣನವರ ಮನೆಯಲ್ಲಿ ಪೂಜೆ.

8.11-90 ಬೆಳಗ್ಗೆ ಮಾರ್ಕೋನಹಳ್ಳಿ ಸಿದ್ಧಲಿಂಗಪ್ಪನವರ ಮನೆಯಲ್ಲಿ ಪೂಜೆ.

9-11-90 ತುಮಕೂರು ತಾ|| ಕರಡಗೆರೆ ಚನ್ನಪ್ಪನವರ ಮನೆಯಲ್ಲಿ ಪೂಜೆ.

10-11-90 ದೊ. ಬ. ಪುರ ತಾ|| ಚಿಕ್ಕಬೆಳವಂಗಲ, ಶ್ರೀ ಶಿವರುದ್ರಯ್ಯನವರ ಮನೆಯಲ್ಲಿ ಪೂಜೆ.

11-11-90 ಬೆಳಗ್ಗೆ 8 ಕ್ಕೆ ತುಮಕೂರು ಸೋಮಣ್ಣ ರಾಜಶೇಖರ್, ನೂತನಗೃಹ ಪ್ರವೇಶದಲ್ಲಿ ಪೂಜೆ. ನೆಲಮಂಗಲ ತಾ|| ಹುಸ್ಕೂರು, H.G. ಬಸಪ್ಪನವರ ಮನೆಯಲ್ಲಿ ನಾಮಕರಣ, ಪೂಜೆ.

12-11-90 10-30 ಕ್ಕೆ ತುಮಕೂರು ಧಾನ್ಯವರ್ತಕರ ಸಂಘದ ಬ್ಯಾಂಕ್‌ನ ಹೊಸ ಶಾಖೆಯ ಉದ್ಘಾಟನೆ.

13-11-90 ಶ್ರೀ ಮಠದ ವಿದ್ಯಾಸಂಸ್ಥೆಯ ಜೂನಿಯರ್ ಕಾಲೇಜುಗಳ ಉಪನ್ಯಾಸಕರುಗಳ ಸಂದರ್ಶನದಲ್ಲಿ

14-11-90 ಮಾಗಡಿ ತಾ|| ಮಹಂತೇಶ್ವರಸ್ವಾಮಿ ಗದ್ದುಗೆ ಮಠದಲ್ಲಿ ಮಾದೇನಹಳ್ಳಿ ನಂಜುಂಡಪ್ಪನವರ ಮಗುವಿನ ನಾಮಕರಣ ಹಾಗೂ ಪೂಜೆ.

15-11-90 ಮಾಗಡಿ ತಾ|| ಉಳ್ಳೇನಹಳ್ಳಿ ಮಹಾದೇವಯ್ಯನವರ ಮನೆಯಲ್ಲಿ ಪೂ

16-11-90 ಕುಣಿಗಲ್ ತಾ|| ಎಡೆಯೂರು ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಸನ್ನಿಧಿಯ ಸರ್ವಧರ್ಮ ಸಮ್ಮೇಳನ ಉದ್ಘಾಟನಾ ಸಮಾರಂಭ.

17-11-90 ತುಮಕೂರು N. R. ಜಗದೀಶ್ ಅವರ ಮನೆಯಲ್ಲಿ ಪೂಜೆ.

18-11-90 ಬೆಳಗ್ಗೆ 7ಕ್ಕೆ ತುಮಕೂರು ಶ್ರೀ ಗುರುಕುಲ ಹಾಸ್ಟಲ್ ಕಟ್ಟಡದ ಫೋಟೋ ಸ್ಟುಡಿಯೋ ಪ್ರಾರಂಭೋತ್ಸವ. ಬೆ. 10ಕ್ಕೆ ಬೆಂಗಳೂರ ಅಕ್ಕಿಮಂಡಿ ರಾಜಣ್ಣನವರ ಮನೆಯಲ್ಲಿ ಪೂಜೆ ಸಂ. 3ಕ್ಕೆ ಬೆಂಗಳೂರ ಬನಶಂಕರಿ, ದಿ|| ಬಸವಯ್ಯನವರ ಮನೆಯಲ್ಲಿ ಪೂಜೆ.
ಸಂ. 4ಕ್ಕೆ ವಿದ್ಯಾಸಂಸ್ಥೆ ಆಡಳಿತ ವರ್ಗದ ಸಭೆ.

20-11-90 ಮಾಗಡಿ ತಾ|| ಪಾಲಹಳ್ಳಿಯಲ್ಲಿ ಆರಾಧನೆ ಮತ್ತು ಪೂಜೆ.

21-11-90 ತುಮಕೂರು ಸಿದ್ಧಗಂಗಾ ಬಡಾವಣೆ ಈಶ್ವರಯ್ಯನವರ ಮನೆಯಲ್ಲಿ ಪೂ

22-11-90 ತುಮಕೂರು ತಾ|| ನೇರಳಾಪುರ-ಗುನೆಗೊಲ್ಲಹಳ್ಳಿಯಲ್ಲಿ ಪೂಜೆ.

23-11-90 ತುಮಕೂರು ಮಂಡಿ ವರ್ತಕರು, ಶ್ರೀ ಕೆಂಪಣ್ಣನವರ ಮನೆಯಲ್ಲಿ ಪೂಜ

24-11-90 ಬೆಂಗಳೂರು ಹನುಮಂತನಗರ, ಬಸವಣ್ಣಯ್ಯನವರ ಮನೆಯಲ್ಲಿ ಪೂಜ

25-11-90 ಜಯದೇವ ಇಂಡಸ್ಟ್ರೀಸ್ ಅಂಡ್ ಸಪ್ಲೈಸ್, ಸಂತೇಪೇಟೆ, ಮೈಸೂ ಮೈಸೂರಿನಲ್ಲಿ ವಿ. ವಿಮೊಹಲ್ಲಾ ಹೊಸಕೋಟೆ ಗುರುಮಲ್ಲಪ್ಪನವರ ಮನೆಯಲ್ಲಿ ಪೂಜೆ. ಸಂ 7ಕ್ಕೆ ಬೆಂಗಳೂರು ಆರ್.ಪಿ.ಸಿ ಬಡಾವಣೆ ಶ್ರೀ ವಿನಾಯಕ ಸಂಘದವರು ಏರ್ಪಡಿಸಿರುವ ದೇವಸ್ಥಾನದ ಶಿಲಾನ್ಯಾ

26-11-90 ಅರಸೀಕೆರೆ ತಾ|| ಮಾಡಾಳು ಮಠದಲ್ಲಿ ಪೂಜೆ.

28--11-90 ಬೆಳಗ್ಗೆ ತುಮಕೂರು ಸತ್ಯಮಂಗಲ ಹೊನ್ನಪ್ಪನವರ ಹೊಸಮನೆಪೂ ಸಂಜೆ ಸಿದ್ಧಗಂಗಾ ಫಾರ್ಮಸಿ ಕಾಲೇಜಿನ ಅಭ್ಯರ್ಥಿಗಳ ಸಂದರ್ಶನ.

29-11-90 ಬೆಳಗ್ಗೆ 10ಕ್ಕೆ ಮೈಸೂರು ಜಿಲ್ಲೆ, ಕಲ್ಲುಮರಳಿ ಗ್ರಾಮದಲ್ಲಿ ಪೂಜೆ.

30-11-90 ಮಾಗಡಿ ತಾಲ್ಲೂಕು ನಾರಸಂದ್ರದಲ್ಲಿ ಬ್ಯಾಂಕ್ ಆರಂಭೋತ್ಸವ.

# ಶ್ರದ್ಧಾಂಜಲಿ

ರಾಷ್ಟ್ರದ, ರಾಜ್ಯಪ್ರಶಸ್ತಿ ವಿಜೇತರೂ, ವಚನ ಸಾಹಿತ್ಯ ವಿಶಾರದರೂ, 'ಭವ್ಯಮಾನವ,' 'ಶೂನ್ಯ ಸಂಪಾದನೆಯ ಪರಾಮರ್ಶೆ,' 'ವಚನ ಸಾಹಿತ್ಯ ಸಂಗ್ರಹ' 'ಮೋಳಿಗೆಯ ಮಾರಯ್ಯನ ವಚನಗಳು,' ಮುಂತಾದ ವಚನಗಳು ಕನ್ನಡ ಸಾರಸ್ವತ ಜಗತ್ತಿಗೆ ನೀಡಿದ **ಡಾ। ಸಂ. ಶಿ. ಭೂಸನೂರುಮಠರು** ದಿನಾಂಕ ೬.೧೧-೯೦ ರಂದು ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ' ಅತೀವ ದುಃಖಕ್ಕೊಳಗಾಯಿತು. ದಿವಂಗತರ ಅಗಲಿಕೆಯಿಂದ ಕನ್ನಡ ವಿದ್ವತ್ ಪ್ರಪಂಚಕ್ಕೆ ಅದರಲ್ಲಿಯೂ ಶರಣಸಾಹಿತ್ಯ ಲೋಕಕ್ಕೆ ಅಪಾರ ನಷ್ಟವುಂಟಾಗಿದೆ. ಅವರ ಅಗಲಿಕೆಯಿಂದಾದ ನೋವನ್ನು ಸಹಿಸುವ ಶಕ್ತಿಯನ್ನು ಕುಟುಂಬ ವರ್ಗದವರಿಗೆ ಬಸವಾದಿ ಪ್ರಮಥರು ನೀಡಲೆಂದು ಪ್ರಾರ್ಥಿಸುತ್ತ ಲಿಂಗೈಕ್ಯ **ಭೂಸನೂರು** ಮಠರಿಗೆ 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ, ಮೈಸೂರು ಮಹಾರಾಜ ಸಂಸ್ಕೃತಕಾಲೇಜಿನ ನಿವೃತ್ತ ಪ್ರಾಧ್ಯಾಪಕ ಹಾಗೂ ಆಸ್ಥಾನ ವಿದ್ವಾನ್ **ಪ್ರೊ। ಎಂ ಜಿ. ನಂಜುಂಡಾರಾಧ್ಯರು** ದಿನಾಂಕ ೭-೧೧-೯೦ರಂದು ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ' ಶೋಕಿಸುತ್ತದೆ. ರಾಷ್ಟ್ರಪ್ರಶಸ್ತಿ ವಿಜೇತರಾಗಿದ್ದ ಶ್ರೀ ಆರಾಧ್ಯರು ಸಂಸ್ಕೃತ ಕನ್ನಡದಲ್ಲಿ ಉದ್ದಾಮ ವಿದ್ವಾಂಸರಾಗಿದ್ದರು. ಶಕ್ತಿವಿಶಿಷ್ಟಾದ್ವೈತ, ವೇದಾಂತ, ವೀರಶೈವಾಗಮ ಮತ್ತು ಅಲಂಕಾರ ಶಾಸ್ತ್ರಗಳಲ್ಲಿ ಪ್ರಕಾಂಡ ಪಾಂಡಿತ್ಯ, ಸಂಸ್ಕೃತ ಕನ್ನಡ ಗ್ರಂಥಗಳಲ್ಲಿ ೯೦ ಗ್ರಂಥಗಳನ್ನು ರಚಿಸಿದ್ದರು. ರಾಜ್ಯದ ಹಲವಾರು ವೀರಶೈವ ಮಠಗಳಿಂದ ಪದಕ, ಬಿರುದುಗಳನ್ನು ಪಡೆದಿದ್ದ ಆರಾಧ್ಯರು ೮೪ ವರ್ಷ ತುಂಬು ಜೀವನವನ್ನು ನಡೆಸಿ ಪತ್ನಿ ಮೂವರು ಪುತ್ರಿಯರು, ಮೂವರು ಪುತ್ರರನ್ನು ಅಪಾರ ಬಂಧುವರ್ಗವನ್ನು ಬಿಟ್ಟು ಅಗಲಿದ್ದಾರೆ. ದಿವಂಗತರ ಕುಟುಂಬವರ್ಗದವರಿಗೆ ಬಸವಾದಿ ಶರಣರು, ಶ್ರೀ ಸಿದ್ಧಗಂಗಾ ಶ್ರೀಗುರುದುಃಖವನ್ನು ಸಹಿಸುವ ಶಕ್ತಿಯನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ. 'ಸಿದ್ಧಗಂಗಾ'

ಶ್ರೀಸಿದ್ಧಗಂಗಾ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ಸೋಲೂರಿನ ಶ್ರೀಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಶ್ರೀ **ಬಿ. ಸಿ ಗಣೇಶಯ್ಯನವರು** ನಿಧನರಾದುದನ್ನೂ ತಿಳಿದು 'ಸಿದ್ಧಗಂಗಾ' ಶೋಕಿಸುತ್ತದೆ. ಶ್ರೀಯುತರು ಶ್ರೀಮಠದ ಸನಿವಾಸ ಪ್ರೌಢಶಾಲೆಯಲ್ಲಿ ಅಧ್ಯಾಪರಾಗಿ ಸೇವಾ ಜೀವನವನ್ನು ಆರಂಭಿಸಿ, ವಿವಿಧ ಕಡೆಗಳಲ್ಲಿ ಸೇವೆ ಸಲ್ಲಿಸಿದ್ದರು. 'ಜಗಜ್ಯೋತಿ ಬಸವೇಶ್ವರ ನಾಟಕದಲ್ಲಿ 'ಈಶ್ವರನ' ಪಾತ್ರಧಾರಿಯಾಗಿ ಅಭಿನಯಿಸುತ್ತಿದ್ದುದನ್ನು ಸ್ಮರಿಸುತ್ತ ದಿವಂಗತರ ಕುಟುಂಬ ವರ್ಗದವರಿಗೆ ಬಸವಾದಿ ಶರಣರು, ಶ್ರೀ ಸಿದ್ಧಗಂಗಾ ಶ್ರೀ ಗುರು ದುಃಖವನ್ನು ಶಕ್ತಿಯನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತ ದಿವಂತರಿಗೆ 'ಸಿದ್ಧಗಂಗಾ' ಶೋಕ ಸಂತಾಪವನ್ನು ಸಲ್ಲಿಸುತ್ತದೆ.

# ಶ್ರದ್ಧಾಂಜಲಿ

ಮಹಾಮಹೋಪಾಧ್ಯಾಯ ವಿದ್ವಾನ್ ವೈ. **ವಿಶ್ವನಾಥ ಶಾಸ್ತ್ರಿಗಳವರು** ದಿನಾಂಕ 4-11-90ರಂದು ದಿವಂಗತರಾದರು ತಾ|| 6-11-1908ರಂದು ಶೃಂಗೇರಿ ತಾಲೋಕು ವೈಕುಂಠ ಪುರದಲ್ಲಿ ಜನ್ಮತಾಳಿದರು. 8 ವರ್ಷಗಳ ಕಾಲ ಶೃಂಗೇರಿಯ ಸದ್ವಿದ್ಯಾಸಂಜೀವಿನೀ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತಾಭ್ಯಾಸ ಮಾಡಿದರು. 2 ವರ್ಷಗಳಕಾಲ ಮೈಸೂರು ಸಂಸ್ಕೃತ ಕಾಲೇಜಿನಲ್ಲಿ ಅಧ್ಯಯನ ಮಾಡಿದ ಶಾಸ್ತ್ರಿಗಳವರು ಬೆಂಗಳೂರಿಗೆ ಬಂದರು. ಬೆಂಗಳೂರಿನ ಶೃಗೇರಿ ಶಂಕರ ಮಠದಲ್ಲಿ 10 ವರ್ಷಗಳ ಕಾಲ ಇದ್ದು ನವೀನ ನ್ಯಾಯ, ಅಲಕಾಂರ, ವೇದಭಾಷ್ಯ ಮತ್ತು ಪೂರ್ವಮೀಮಾಂಸ ಈ ನಾಲ್ಕು ವಿಭಾಗದಲ್ಲಿ ವಿದ್ವತ್ ಪದವಿಯನ್ನು ಪಡೆದುಕೊಂಡರು. ಶ್ರೀಮಠದ ಸಂಸ್ಕೃತಕಾಲೇಜಿನಲ್ಲಿ ಅಲಂಕಾರ ವಿಭಾಗದ ಉಪಪ್ರಾಧ್ಯಾಪಕ ಹುದ್ದೆಗೆ ಇವರನ್ನು ವಿದ್ವತ್ ಪೂರ್ಣಪಾಂಡಿತ್ಯಕ್ಕೆ ಮೆಚ್ಚಿ ಪೂಜ್ಯ ಶ್ರೀ ಶ್ರೀ ಗಳವರು ನೇಮಕ ಮಾಡಿದರು. ಪ್ರಾಧ್ಯಾಪಕರಾಗಿ ಅಲಂಕಾರ ಮತ್ತು ವೇದಾಂತ ವಿಭಾಗಗಳಲ್ಲಿ ದೀರ್ಘಕಾಲ ಬೋಧನೆ ಮಾಡಿ ತಾ|| 31-3-1976ರಲ್ಲಿ ಕಾಲೇಜಿನಿಂದ ನಿವೃತ್ತಿಹೊಂದಿದರು. 1982ರಲ್ಲಿ ದೆಹಲಿಯಲ್ಲಿ ನಡೆದ ವಾಕ್ಯಾರ್ಥ ಗೋಷ್ಠಿಯಲ್ಲಿ ಭಾಗವಹಿಸಿ ಅಂದಿನ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರಿಂದ ಗೌರವಿಸಲ್ಪಟ್ಟರು. ಶೃಂಗೇರಿ ಶ್ರೀಗಳವರು "ಪಂಡಿತತ್ರವರ" ಎಂದೂ, ಪ್ರಯಾಗದ ಭಾರತಿ ಪರಿಷತ್‌ರವರು "ಮಹಾಮಹೋಪಾಧ್ಯಾಯ" ಎಂಬ ಬಿರುದುಗಳನ್ನಿತ್ತು ಗೌರವಿಸಿದರು. ವೇದವಾಙ್ಮಯ ಮತ್ತು ಶಾಸ್ತ್ರ ವಾಙ್ಮಾಯಕ್ಕೆ ಸಲ್ಲಿಸಿದ ಸೇವೆಗೆ ರಾಜ್ಯ ಸರಕಾರ ರಾಜ್ಯ ಪ್ರಶಸ್ತಿಯಿತ್ತು 1981ರಲ್ಲಿ ಗೌರವಿಸಿತು. ರಾಷ್ಟ್ರಮಟ್ಟದ ವಿದ್ವತ್ ಗೋಷ್ಠಿಗಳಲ್ಲಿ ಭಾಗವಹಿಸಿ ಭೂಪಾಲ್, ಉಜ್ಜಯಿನಿ, ಕಾಲಟಿ ಮತ್ತು ಶೃಂಗೇರಿಗಳಲ್ಲಿ ವಾಕ್ಯಾರ್ಥ ನೀಡಿದ್ದಾರೆ. 36 ವರ್ಷಗಳಕಾಲ ದೀರ್ಘ ಸೇವೆಮಾಡಿ ಶ್ರೀ ಶಾಸ್ತ್ರಿಗಳವರು ಇದೇ ನವೆಂಬರ್ ಮಾಹೆಯಲ್ಲಿ ರಾಷ್ಟ್ರಪ್ರಶಸ್ತಿಯನ್ನು ಕೇಂದ್ರ ಸರಕಾರದಿಂದ ಪಡೆಯಲಿದ್ದರು. ಅಷ್ಟರಲ್ಲಿಯೇ ವಿಧಿವಶರಾದರು. ಶ್ರೀ ಶಾಸ್ತ್ರಿಗಳವರು ಪ್ರಾಚೀನ ಪರಂಪರೆಯ ಘನೀಭೂತ ಪಾಂಡಿತ್ಯವುಳ್ಳವರಾಗಿದ್ದರೂ, ಸರಳ ಸೌಜನ್ಯ, ಸುಶೀಲರಾಗಿದ್ದರು. ಗಂಭೀರ ಸ್ವಭಾವದವರು, ನಿಗರ್ವಿಗಳು. ಮೃದು ಹೃದಯಿಗಳು ಹಾಗೂ ಭಾವುಕ ಜೀವಿಗಳು. ಇಂತಹ ಧೀಮಂತ ಪಂಡಿತರನ್ನು ಕಳೆದುಕೊಂಡ ಸಂಸ್ಕೃತ ಸಾರಸ್ವತ ಪ್ರಪಂಚಕ್ಕೆ ತುಂಬಲಾರದ ನಷ್ಟವುಂಟಾಯಿತು. ದಿವಂಗತರಿಗೆ "ಸಿದ್ಧಗಂಗಾ" ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

**ಹೋಟೆಲ್,**
**ಶ್ರೀ ನಂಜುಂಡೇಶ್ವರ**
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ
**8597, 2373, 2577**







**ಶ್ರೀ ನಂಜುಂಡೇಶ್ವರ**
**ಬೇಕರಿ**
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು-1
ದೂರವಾಣಿ : **8077**



**ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್**
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : **2677**

**ಸಿ.ವಿ. ಮಹದೇವಯ್ಯ**
ಮ್ಯಾನೇಜಿಂಗ್ ಪಾರ್ಟನರ್
2477

**ಶ್ರೀ ನಂಜುಂಡೇಶ್ವರ ಸ್ವೀಟ್ಸ್**
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು-1
ದೂರವಾಣಿ : **2077**

## ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘದ ಆಜೀವ ಸದಸ್ಯರ ಪ

284 ಶ್ರೀ ಹೆಚ್. ಸದಾಶಿವಯ್ಯ, ನಂ. 1439 ನಿವೃತ್ತ ಉಪಾಧ್ಯಾಯರು, ಐಗೂರು ಬಡಾವಣೆ, ರಾಮನಗರ

285 ಶ್ರೀ ಎನ್. ಚನ್ನಬಸವಯ್ಯ, ನಂ. 668/10, 5ನೇ ಬ್ಲಾಕ್, 61 ಕ್ರಾಸ ರಾಜಾಜಿನಗರ, ಬೆಂಗಳೂರು-560010.

286 ಎಸ್. ಕಾಂತಪ್ಪ, ನಂ. 668/10, 5ನೇ ಬ್ಲಾಕ್, ರಾಜಾಜಿನಗರ ಬೆಂಗಳೂರು-10

287 ಶ್ರೀ ವಿ. ಸೋಮಶೇಖರಯ್ಯ ನಂ. 778, 5ನೇ ಮುಖ್ಯ ರಸ್ತೆ, ವಿಜಯನಗ ಬೆಂಗಳೂರು-560040

288 ಶ್ರೀ ಬಿ. ಎಸ್. ಉಮಾಶಂಕರ್, ಬ್ಯಾಲಕೆರೆ ಮತ್ತು ಅಂಚೆ, ಮಾಗಡಿ ತಾ

289 ಶ್ರೀ ಬಸವರಾಜು, ಮುಖ್ಯ ಶಿಕ್ಷಕರು ಮಂಜುನಾಥ ಪ್ರೌಢಶಾಲೆ, ಮಾಗಡಿ ರಸ್ತೆ, ಬೆಂಗಳೂರು-560023

290 ಶ್ರೀ ರಂಗನರಸಯ್ಯ, ಶಿಕ್ಷಕರು, ಮಂಜುನಾಥ ಪ್ರೌಢಶಾಲೆ, ಮಾಗಡಿ ರಸ್ತೆ ಬೆಂಗಳೂರು-560023.

291 ಶ್ರೀ ಪಿ .ವಿ. ಹುಚ್ಚವೀರಯ್ಯ ನಂ 450/H 9ನೇ D ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-5600-0

292 ಶ್ರೀ ಜಿ. ಶಿವಣ್ಣ ನಂ. 796, 12ನೇ ಮುಖ್ಯ ರಸ್ತೆ ಹನುಮಂತನಗರ ಬೆಂಗಳೂರು-560019.

293 ಶ್ರೀ ಸಿ. ಎಂ. ಚನ್ನಬಸಪ್ಪ ವಿನಾಯಕ ಕಟ್ಟಡಗಳು ರಾಜೇಂದ್ರನಗರ, ಹಾ ಧಾರವಾಡ ಜಿಲ್ಲೆ.

294 ಶ್ರೀ ಕೆ. ಎನ್. ಸ್ವಾಮಿ, ಕನ್ನಡ ಪಂಡಿತರು, ಸ॥ ಪ್ರೌ॥ ಶಾಲೆ, ದಾವಣ ಚಿತ್ರದುರ್ಗ ಜಿಲ್ಲೆ.

295 ಶ್ರೀ ಕುಮಾರ ಸ್ವಾಮಿ, ಕನ್ನಡ ಪಂಡಿತರು, ಮಂಜುನಾಥ ಬಾಲಿಕಿಯರ ಪ್ರೌ॥ ಶಾಲೆ, ಬಸವಣ್ಣದೇವರ ಮಠ, ನೆಲಮಂಗಲ.

296 ಶ್ರೀ ಆನಂದಪ್ಪ ಆಮರಾವತಿ ಲೇ ಔಟ್, ಬಂಗಾರ ಪೇಟೆ, ಕೋಲಾರ ಜಿಲ್ಲೆ